ಪರಿಯಾಪ್ತ್ಯರ್ಥ ಕರ್ಮಗಳ ಉಚ್ಚರಿಸುತ ಗೋಪರ ಮೇಳ
ಪರುಷವಲಾ ರಾತ್ರಿಯಲಿ ಸುಸ್ಥಿರರಾದರು ಯಮುನೆಯಲಿ ೧೮

ನಂದನಸತಿ ಸುಖಿಸಿದಳು ಕೃಷ್ಣ ಕಂದನ ಬಿಗಿದಪ್ಪಿದಳು
ನಂದಾದ್ಯಖಿಳ ಗೋಪಳರು ಅಲ್ಲಿಯೊಂದ್ಯಾವಿಸಿಯ ನೂಕಿದರು ೧೯

ಆ ನಿಶಿ ದಾವಾಗ್ನಿಯನು ನುಂಗ್ಯಾನಿಖಿಳರ ಸಲಹಿದನು
ಸ್ಥಾನಕೆ ಸುಖದಿ ಐದಿದರು ದಯಾನಿಧಿ ದಯಾಪೂರಣರು ೨೦

ಇಂತಾಮರಮುನಿಗೇಯ ಅನಂತಾದ್ಭುತ ಶುಭಚರಿಯ
ಸಂತಸವಿಯುಧ ಸಂಪ್ರಿಯ ವಿಶ್ರಾಂತಿರಹಿತ ಗುಣಗೇಯ ೨೧

ಈ ಕಾಳಿಯ ಉದ್ಧರಣ ಪಾಪಾಕರಷಣ ಸುಖಕಾರಣ
ಶ್ರೀಕರ ಪ್ರಸನ್ವೆಂಕಟೇಶ ಸರ್ವದಾ ಕರುಣಿಪನು ಸರ್ವೇಶ ೨೨

## ೨೯

ರಾಗ : ಭೈರವಿ                ತಾಳ : ಅಟ್ಟ

ಕಾಲ ಕಾಲ ಮರಿತ ಕೋಲಾಹಲದಿಂ ಪ್ರಜಾ ಜಗತ್
ಪಾಲ ಪಾಲಿಸುತಿದ್ದ ನಂದನಾತ್ಮಜ ಪ.

ಜನಕೆ ತುಷ್ಟಿಯಿಲ್ಲದಿಹ ಗ್ರೀಷ್ಮಋತು ಬರಲ್
ವನಜನಾಭನಾಜ್ಞೆಯಿಂ ವಸಂತಕಾಲದೋಲ್
ದಿನದಿನಕ್ಕೆ ಅಧಿಕ ಸೌಖ್ಯದೋರಿ ಸಕಲರ
ಮನಸಿಗುಲ್ಲಾಸವಾಯ್ತು ಕೃಷ್ಣರಾಮರ ೧

ಒಮ್ಮೊಂದೊಮ್ಮೆ ವಿಷದ ಗಾಳಿಯಲ್ಲಿ ಬೀಸಿತು
ದುಮ್ಮನದಿಂದುಪದ್ರ ಜನವಿನಾಶ ಮಾಡಿತು
ಬೊಮ್ಮನಿಂದವಧ್ಯವರವನೈದಿ ಉಗ್ರನು
ಆಮ್ಮಹಿಯಲ್ಲಿ ದೈತ್ಯ ವೃಕ್ಷರೂಪಿಲಿದ್ದನು ೨

ವೃಕ್ಷ ಗಂಧಗಾಳಿ ಸೋಕಿ ಸಕಲ ತರುಗಳು
ಕಕ್ಷದಹನವಾಗಿ ಹೋಗಿ ಕಾಡಕಿಚ್ಚಿನೊಳು

ಆ ಕ್ಷೇತ್ರಕ್ಕೆ ಬಾಗಿಹೋಗೆ ಪತ್ರಪುಷ್ಪಫಲ
ಅಕ್ಷಿಗೋಚರವಿಲ್ಲವಾಗೆ ಬರಿಳೆಮಂಗಳ ೩

ಅವರ ಗಾಳಿ ಬೀಸಿ ಗೋಗಳು ನರರು ಗೋವರು
ಬೆವರುವಸ್ತ್ರ ಬಂದು ಬಿದ್ದರು ಬಳಲುಕಾದ್ಯರು
ಸುವರುಣಸ್ಪರನು ಸೀಳಿದ ವಿಷದ ತರುವನು
ಮುದವನಿತ್ತು ಹೊರೆದ ಅಗ್ರಜ ಗೋವ್ರಜರನು ೪

ಸಕಲಾರೋಗ್ಯ ಭಾಗ್ಯವಂತರಾದರು
ಮುಕುತವಮ್ಯನಂತೆ ಸೋಂಕಿ ಶಾಂತಪೂರ್ಣರು
ಭಕುತಿ ಜ್ಞಾನ ವೈರಾಗ್ಯಯುಕುತರಾದರು ಜೀವನ್
ಮುಕುತರಾಗಿ ಅವನ ಲೋಕದಂತೆ ಬಾಳ್ದರು ೫

ಸಿಟ್ಟಿನೀಳು ಗೂಳಿಗಳನು ಶೀಘ್ರ ಸದೆದನು ಶ್ರೀ
ಕೃಷ್ಣ ಕುಂಭಕನ್ನ ಕ್ಷ್ವೆಕೆಯೊಳ್ದ ಧೀರನು
ದುಷ್ಟಮಥನ ಪುಣ್ಯಕಥನ ಯಶೋದೆಯಣ್ಣನ
ಶಿಷ್ಟತನುಜೆ ನೀಳಾದೇವಿಯರಸ ಮೋಹನ ೬

ಹೀಗೆ ಶ್ರೀಕೃಷ್ಣ ರಾಮರಾಚರಣೆಗಳು ನಿತ್ಯ
ಯೋಗಿ ಜನರ ಹೃದಯ ಧ್ಯಾನ ಜ್ಞಾನಕೊಪ್ಪಲು
ನಾಗಣೆಯನಾಟ ಪುಣ್ಯಗೋವಳೆಯರೊಳು ಪೂರ್ಣ
ಭೋಗಿ ಪ್ರಸನ್ವೆಂಕಟಕೃಷ್ಣನ ಆಜ್ಞೆ ಮೆರೆಯಲು ೭

## ೩೦

**ರಾಗ : ಕನ್ನಡಗೌಳ** **ತಾಳ : ಏಕತಾಳ**

ನಾಕೇಶನ ವನವೀ ವೃಂದಾವನ
ಗೋಕುಲವ್ರಜರೇ ನಾಕಜರು
ಈ ಕಾಳಿಂದಿಯೇ ಸ್ವರ್ಧುನಿ ಶ್ರೀಬಲ
ಶ್ರೀಕೃಷ್ಣರು ವಾಸವಾಗಿಹರು ೧

ಶುಷ್ಕ ಲತಾತರು ವರ್ಜ್ಯವು ವನದಲಿ
ಪುಷ್ಕರಿಲ್ಲದ ನೀರಿಲ್ಲ

ಪುಷ್ಕಳ ಕರೆವವು ಅವು ಮಹಿಷಿಯರು
ದುಷ್ಕೃತಪರಹರಿ ಸಿರಿನಲ್ಲ ೨

ಶುಕ ಪಿಕ ಶಿಖಿಹಂಸಗಳ ಕಲೋಚ್ಚರ
ನಿಖಿಳವನ ಸುಸ್ಥಳದಲ್ಲಿ
ಸಕಲ ಕುಸುಮ ಫಲ ಸತತ ಸಂಪೂರ್ಣವು
ಲಕುಮಿಯು ರಮಣನಿದ್ದಲ್ಲಿ ೩

ಕಕ್ಷಾಶನನಾಟವೆ ನಡೆಯದು ಕಮ
ಲಾಕ್ಷನ ಪಾದಸ್ಪರ್ಶದಲಿ
ತೀಕ್ಷ್ಣಕರೇಂದುಕರಗಳೆ ತೋರವು
ಪಕ್ಷಿಗಮನನ ಸುಳಿಹಿನಲಿ ೪

ನಿರ್ಝರ ಜಲಸಂಕೀರ್ಣವು ಝರಿಗಳ
ಗರ್ಜನೆ ಶ್ರಾವ್ಯವಾಗಿಹವು
ಪರ್ಜನ್ಯಾಪೇಕ್ಷೆಯು ತೋರದು ಶ್ರೀ
ನಿರ್ಜರಪತಿಯು ಸಂಚರವು ೫

ಕಂಜ ಬಕುಳ ಕಲ್ಹಾರೋತ್ಪಲರಜ
ವ್ಯಂಜಕದಾಮೋದದಲಿ
ಮಂಜುಳ ಮಧುಕರ ಝೇಂಕಾರ ಮನೋಹರ
ಕಂಜಾಕ್ಷನ ಆಟಣೆಯಲಿ ೬

ಕುಸುಮಾಮೋದದ ಸಹ ಸಂಚರಿಸುವ
ನಸುಯೆಳೆಯೆಲರಿನ ಸುಳಿವು
ಎಸೆವ ವಿಚಿತ್ರ ಮೃಗಾಳಿಯ ಕ್ರೀಡೆಯು
ಶಶಿಕುಲದರಸನ ನಲಿನಲಿವು ೭

ಓಂಗಿರುತಲ್ಲಿಯ ಶ್ರೀಕರವನದಲಿ
ಗೋಗೋಪರನು ಬೆರೆಸಿಹನು
ಪೂಗೊಂಚಲವು ಪ್ರವಾಳ ಬರುಹಿಂಗರಿ
ಶ್ರೀಗೋವಿಂದನು ಮುಡಿದಿಹನು ೮

ಗೋಗಣ ಚರಿಸುತ ಅತಿ ಅತಿ ಮಧುರವ
ರಾಗದ ವೇಣುಸ್ವನದಿಂದ
ಯೋಗಿಜನೇಶ್ವರ ಮೋಹಿಪ ಭಾವನ
ಸೌಘಾವ ವಿಧಿಭವನಾರವಂದ್ಯ ೯

ಮೋದವು ದಕ್ಷಿಣ ಪಕ್ಷವು ಗಡ ಪ್ರ
ಮೋದವು ಉತ್ತರಪಕ್ಷ
ಮೋದಾತ್ಮನ ಶಿರಮೇಲೊಪ್ಪಿತು ವಿ
ನೋದಕೆ ಶ್ರೀಕಾಕಪಕ್ಷ ೧೦

ಶ್ರೀಕಂಠನೊಲ್ಲುವ ವಿವಹಿಪ ಪುರಹರ
ನಾಕೇಶನ ನಾಟಕನೀಗೆ
ಈ ಕಾನನದಾಟವು ನಟವೇಷವು
ಯಾಕಿನ್ನಿವು ಬೇಕಿನ್ನವಗೆ ೧೧

ಹಾರಾಟವು ಗೋವತ್ಸಗಳ ಸಂದಿಗೆ
ಪರಾಟವು ಭ್ರಮರಾಣದ ಆಟ
ದಾರವದ್ಭಾಸ್ಯವು ಫಲಗಳನೊಗೆಯುತ
ಚೀರಾಟವು ಕಾಮ್ಯಸುಕಾಟ ೧೨

ಚೆಂಡು ಚಿಣ್ಣಿ ಪವಕಳಿ ಬೊಗರೆಗಳು
ಗುಂಡೆತ್ತಾಟವು ಮರದಾಟ
ಹಿಂಡು ಗೋವಳರ್ದ್ವರಿ ಬಲರಾಮರು ಪೃಥಕ್
ಮಂಡಲ ಮಾಡ್ಯಾಡುವ ಆಟ ೧೩

ಯಮುನೆಯ ತೀರದಿ ಗಿರಿತಪ್ಪಲ ಬದಿ
ರಮಣೀಯ ಕುಂಜ ಪುಳಿನಸ್ಥಳದಿ
ಅಮಿತ ಕ್ರೀಡೆಯನಾಡಲು ನೋಡುವ
ಅಮರರು ತಾವ್ ಸುಖಹೊಂದಿ ೧೪

ಅಲ್ಲಲ್ಲಾಕಳುಗಳ ಕಾಯುತ ಸಖ
ಗೊಲ್ಲರ ಬೆರಸಿ ಮುಕುಂದ
ಉಲ್ಲಾಸದಲಿರೆ ದೈತ್ಯ ಪ್ರಲಂಬನು
ಗೊಲ್ಲರ ವೇಷದಿ ತಾ ಬಂದ ೧೫

ದಾಶಾರ್ಹರ ಕೊಲಪೇಕ್ಷಿಸುತಲಿ ಖಳ
ದ್ವೇಷದಿ ಗೆಳೆತನವಿಡಿದ
ಶ್ರೀ ಸರ್ವಜ್ಞ ಶಿಖಾಮಣಿಯವನೊಳು
ತಾ ಸಖ್ಯವನು ಬೆರಸಿದ ೧೬

ಭಾಂಡೀರವನದ ವಟತಳ ಗೋಗಳ
ಹಿಂಡನು ಆಗಲಿರೆ ಮುರಮಥನ
ಮಂಡಲವೆರಡನು ಮಾಡಿದ ದಾಮನ
ತಂಡಕೆ ದಾಮಾ ವೃಷಭರನು ೧೭

ಮೋಕ್ಷಿಸಿದ ಸೋತವ ವಾಹಕ
ಸೋಲ್ದವನೇ ವಾಹ್ಯನು ಎಂದೆನುತ
ಹೇಳಿದ ಭದ್ರಸೇನಾದಿ ಸಕಲ ಗೋ
ಪಾಲರರಿಗೆ ಜಗತ್ಕರ್ತ ೧೮

ಸೋಲು ಗೆಲುವಿನಲಿ ವಾಹಕವಾಹ್ಯಕೆ
ಸಾಲುಗೋವಳರಾದ್ಯೆಂದು
ಶ್ರೀಲೋಲನು ತಾ ಅಸುರನ ಸಹ ಗೋ
ಪಾಲಕರೊಡನೆ ಬೇರಿದ್ದ ೧೯

ಪಕ್ಷದ್ವಯವನು ಮಾಡ್ಯಾಡಲು ಖಳ
ರಾಕ್ಷಸ ಕಂಸನ ಭಟನು
ಋಕ್ಷಬಲನ ಎತ್ತೊಯ್ದನು ತಾನಂತ
ರಿಕ್ಷಕ್ಕೆ ಬರುತಿರೆ ಬಲನು ೨೦

ಬೆದರುತ ಹರಿಸ್ತುತಿ ಮಾಡಲು ಸಾಸಿರ
ವದನನ ಸಮವು ಬಲಬಂದು
ವಂದವಂತ್ರವನಿಗೆ ನಿತ್ರಾಣಾಯಿತು
ಕಂಧರನ ಗೌರವವ ಕಂಡು ೨೧

ಕುಟಿಲ ಖಳನ ಅಲಂಕಾರಾಕಾಶದಿ
ತಟಿತ ದ್ಯುಮಣಿಯಂತೆ ಜ್ವಲಿಸೆ
ಪಟುಬಲನೊಪ್ಪಿದ ದುಷ್ಟನ ಪೃಷ್ಠದ
ತಟದಿ ಶಶಿವೋಲ್ ಥಳಥಳಿಸೆ ೨೨

ದೇಶವಿ ವೃಷಭಮುಷ್ಟಿಯರಿ ಗಾಡ್ವಿಪ
ದ್ವೇಷಿಯು ನಿತ್ರಿಯು ದೋಶಿ
ಪಾಶಪಸ್ವಪ್ರದಿ ಗಿರಿಕಿಪೆದೋರ್ ಶಿರ
ಸಾಸಿರ ಶಿಣಾಗ್ರಪ ಪಿಶಿ ೩೧

ನಿತ್ತರು ಕಾರುತ ಗಿರಿಯೋರ್ ಬಿದ್ದಿರೆ
ಸುತ್ತಣ ಗೋಪರುಗಳು ನೋಡಿ
ಸ್ತೋತ್ರವ ಮಾಡಿದರ್ ಸಾಧು ಸಾಧು ಫಲ
ಪತ್ರಪನನ ಕೊಂಡಾಡಿ ೩೨

ಸುಮನ ವೃಷ್ಟಿಯನು ಸುಮನಸಗಣದವರು
ಅಮಿತ ದುಂದುಭಿ ವಾದ್ಯವನು
ಕಮಲನಯನ ಬಲ ಬಲಶಾಲಿಗಳು ತಮ್ಮ
ರಮಣೀಯ ಗೃಹಕೈದಿದರು ೩೩

ದ್ರೌಪದಿ ನಂದ ಯಶೋದೆ ರೋಹಿಣಿ
ಈ ಮಕ್ಕಳನಪ್ಪಿದರು
ಆ ಮಹಾತೋಷಕೆ ಎಣೆಯುಂಟೆ ಬಲ
ರಾಮ ಶ್ರೀಹರಿಗೆ ಸಮರುಂಟೆ ೩೪

ಗಂಧ ಮಾಲ್ಯಾಂಬರ ಭೂಷಿತರಾಗಿಹ
ಸುಂದರವರರು ಒಪ್ಪಿದರು
ವೃಂದಾರಕವಂದಿತ ಪ್ರಸನ್ವೆಂಕಟ
ಮಂದಿರದರಸುಗಳಿವರು ೩೫

## ೩೧

**ರಾಗ : ಮೋಹನ ಕಲ್ಯಾಣಿ** **ತಾಳ : ಏಕತಾಳ**

ವೃಷ್ಣಿವರ್ಯರ್ ಕೃಷ್ಣನಂಘ್ರಿ ಸ್ಪೃಷ್ಟವಾದ ಗೊಪ್ಪಕೆಲ್ಲ
ತುಷ್ಟಿಯಾಯಿತು ವೃಷ್ಟಿಕಾಲ ಕಷ್ಟದೋರದು
ತುಷ್ಟವಾಗ್ಯಧೇಷ್ಟವಾರಿ ಪ್ರಷ್ಟ ಪೈರ್ಗಳಷ್ಟು ಬೆಳೆಯೆ
ಮಿಷ್ಟ ಅಶನ ಸ್ಪಷ್ಟಜ್ಞಾನನುಷ್ಠಾನ್ಹೆಚ್ಚಿತು ೧

ನೀಲಿ ನೀರದಾಳಿ ಸಿಡಿಲ್ಗಾಳಿ ಕೆಂಧೂಳಿಗಳ
ಮಳಿಗೆಯು ಕೋಲುಮಿಂಚು ಮೇಲೆ ಮೇಲೆಯು
ಲೋಲೈಸೆ ಸ್ಥೂಲಧಾರೆಜಾಲ ಮುಸುಕಿ ಬಹಳ ವರ್ಷ
ಕಾಲ ಒಪ್ಪೆ ಶ್ರೀಲಲನೆಯು ಲೋಲಿಸಿದ್ದಲ್ಲಿ ೨

ಕೆರೆಬಾವಿಗಳು ತೊರೆಗಳು ಪುಷ್ಕರಣಿಗಳು ಭರಿತ ಜಲದಿ
ಮೊರೆಜಲ್ಲಿದವಿರದೆ ಯಮುನೆ ಬಿರಸಿ ನಡೆದಪ್ಪ
ತರು ವೀರುಧ ಉರು ಪುಷ್ಪಾಗೆ ಮರಜಂಬು ಖರ್ಜೂರ ದ್ರಾಕ್ಷೆ
ಪರಿಪಕ್ವದಿ ಮೆರೆದವಲ್ಲಿ ಹರಿಯು ವನದಿ ೩

ಮಾನವರ್ಗೆ ಗೋನಿಕರ ನಾನಾಜಾತಿ ಪ್ರಾಣಿಗಳಿಗೆ
ಪ್ರಾಣ ಕಾಯು ನಯನ ನಂದಸೂನುವಿದ್ದಲ್ಲಿ
ಶ್ರೀನಾಥ ಸಖ ನಿಕಟದಿ ವನದ ನವೀನ ಜಂಬು
ವನು ಖರ್ಜೂರರಸುಂಡನು ಆನಂದಾತ್ಮನು ೪

ಕೆಚ್ಚಲ ಭಾರದಿ ಚಲಿಪ ಚೊಚ್ಚಲಾಕ್ಳುಚ್ಚಾಲು
ನಿಚ್ಚ ಕರೆದನಚ್ಚರಿಯ ಉಚ್ಚಾರಗಳಿಂ
ಪಚ್ಚವರ್ಣೆ ಸ್ವಚ್ಛರೂಪೆ ಅಚ್ಚನೀಲೆ ಪುಚ್ಚನಮ್ಮ
ಮುಚ್ಚಿನಮ್ಮ ಉಚ್ಚಗುಣೆಯೆ ಹಚ್ಚಗಿಣಿಯೆ ಬಾ ೫

ಗಂಗೆಗೌರಿ ತುಂಗಭದ್ರೆ ಮಂಗಳೆ ಧೂಮ್ರಾಂಗೆ ಗೋವೆ
ರಂಗೆ ಭೀಮೆ ಸಿಂಗರೇ ಸುಸಂಗೆ ತ್ರಿವೇಣಿ
ಭೃಂಗೆ ಚಿಂಚೆ ಪಿಂಗೆ ಹಂಪೆ ಶೃಂಗಿ ಕೃಷ್ಣೆರಂಗು ಮುತ್ತೆ
ಪಿಂಗಳೆ ಹೇಮಾಂಗಿಯೆಂದು ರಂಗ ಕರೆದನು ೬

ವಾರುಣಿ ಕವೇರಕುವರೆ ನೀರದಾಂಗೆ ನೀರಜಾಕ್ಷಿ
ಸಾರಸ್ವತಿಯೇ ಭೀರುನೇತ್ರೆ ಚಾರುವದನೆ ಬಾ
ಶ್ರೀರಮಣ ಗಭೀರರವದಿ ಸಾರಿ ಕರೆಯೆ ದೂರದಿಂದ
ಜಾರವದಿ ತೂರಿಬಂದವು ವೀರವೇಗದಿ ೭

ಬಂದು ಬದಿಯ ಹೊಂದಿ ಹರಿಯ ಸ್ಕಂಧದಲಿ ಸ್ಕಂಧವಿಟ್ಟಾ
ನಂದದಿ ಆನಂದಾತ್ಮನ ಇಂದು ಲೇಹಿಪವು
ಮಂದಹಾಸದಿಂದ ಕೃಷ್ಣ ಒಂದೊಂದಾವ ಸುಂದರ ಕೈ
ಯಿಂದ ತುರಿಸೆ ಅಂದು ಮೋಕ್ಷಾನಂದದೋರಿತು ೮

ಇಂತಪ್ಪ ಶ್ರೀಯುಗಳಂಘ್ರಿ ಪದ್ಮಂಗಳನುಭವರು ಹೊಕ್ಕು
ಗಿರಿಗಳ್ಪ್ಯದಿ ಚರದಿಹವರು ಕಂಡಮಾಂಬಿನ
ಪರಮ ಫಲಂಗಳ ಪರಮಧ್ಯಾನ್ನ ಚರಪ್ಪಂಬಿನ ಹರಿಯಮೇಲೆ
ಪರಿಷದಿಂದಿಯರು ಕೊಡೆ ನಿರುತ ತೃಪ್ತರು ೯

ಎಳೆಯ ಹುಲ್ಲು ಮೆಲುವಾಗ ಕಂಗಳನ್ನು ಮುಚ್ಚಿ ಗೋವು
ನಳಿನಾಕ್ಷನ ಚೆಲುವ ಮೂರುತಿ ಮೊಳೆವ್ವ ನೋಡಿದವು ೧೦

ಶರತ್ಕಾಲ ಬರಲಾಯಿತು ನಿರುಮಲದಿ ಸರಗಳೊಪ್ಪೆ
ವಿರಚಿತಾಭ್ರ ಶಾರ್ವರೀಶ ಸರ್ವರಿಗಿಷ್ಟನು
ಪರಮತಿಗ್ಮಕಿರಣತಾಪ ಸರಿದುಹೋಗೆ ಇರುಳಿನಲ್ಲಿ
ಸ್ಮರನ ಬಾಣ ಸರಸಿಜಾಕ್ಷಿಗೇರಗುತಿದ್ದವು ೧೧

ರಂಗನಂಗಸಂಗಕೆ ಗೋಪಾಂಗನೇರು ಸಂಗಡಿಸಿ
ಸಂಗೀತದಿ ಮಂಗಳ ಗುಣಂಗಳ್ಕೇಳ್ವರು
ಅಂಗನೇರು ಅಂಗಜನ್ನ ಸಂಗರ ಮತ್ತಾಂಗಿಯರು
ಸಿಂಗರ ವನಂಗಳಲ್ಲಿ ಹಿಂಗದಿಪ್ಪರು ೧೨

ಕುಸುಮನಾಭ ಕುಸುಮಿತ ವನಪ್ರಸರದಲ್ಲಿ ಪಶುಕಾಯುತ್ತ
ಮಿಸುನಿಕೊಳಲ ರಸತುಂಬಿ ನಾದಿಸುತಲಿರ್ದನು
ಹೊಸಪ್ರಾಯದ ಅಸಿಯರು ಪರವಶರಾಗುಲ್ಲಸದಿ ರತಿ
ರಸಿಕೆರೆಲ್ಲ ರಸಿಕನ ಇಚ್ಛಿಸುತಲಿರ್ದರು ೧೩

ವರವರ್ಣೇರು ವಿರಹತೆರೆಯ ಶರಧಿಲೀಸುತಿರಲು ಕಂಡು
ಸ್ಮರನಯ್ಯನುದ್ಧರಿಸಿದನು ಕರುಣವಾರಿಧಿ
ಇರುಳು ಹಗಲು ಹರಿಯಲೀಲೆ ಸ್ಮರಿಸುತಿಪ್ಪರರಸಿಯರು
ಪರಮ ಭಕ್ತಿಭರಿತರಾಗಿ ಹರಿಣನೇತ್ರರು ೧೪

ಅಹೋರಾತ್ರಿ ಶ್ರೀಹರಿಯ ರೂಪಧ್ಯಾನ ಮೋಹಿತರು
ದೇಹೇಂದ್ರಿಯ ಗೇಹ ಪ್ರಾಣ ಸ್ನೇಹವವನಲ್ಲಿ
ಬಾಹ್ಯವಿಷಯರಹಿತೆಯರು ಆ ಹೆಂಗಳ ಮೋಹರವು
ಮಹಾಪುರುಷರಾ ಹೋಲಿಕೆಯಲಿಹರು ವ್ರಜದಿ ೧೫

ಕಣ್ಣಲಿ ರಂಗನ್ನ ಪೂರ್ತಿ ಕರಣಗಳಿಗೆ ಅವನ ವಾರ್ತೆ
ಮನ್ನವು ಧ್ಯಾನಾನ್ವಿತ ಕೀರ್ತನ್ನೆ ಜಿಹ್ವೆಗೆ
ಕನ್ಯೆಯರು ಧನ್ಯರು ಪಾವನ್ನೆಯರು ಜನ್ಮಯು ಪ್ರ
ಸನ್ನವೆಂಕಟಮಾನ್ಯೆಯರು ಪುಣ್ಯಶಾಲಿರು ೧೬

## ೩೨

## ವೇಣುಲೀಲೆ

ರಾಗ : ಕನ್ನಡಗೌಳ ತಾಳ : ಅಟ್ಟ

ವೇಣುಗೋಪಾಲನ ವೇಣು ವರ್ಣಿಪರು ಜಾಣೆ ಗೋಪೇರೆಲ್ಲ ಗಾನಾಮೃತವುಂಡು
ಬಾಣಪಂಚಕನ ಬಾಣದಟ್ಟು+[1]ಳಿಗೆ ಪ್ರಾಣ ವೆಂಡಣಿಸಿ ಧ್ಯಾನಿಪರು ಪ.

ಎಳೆನೇಸರ್ಗಳ ಬಳಗವಂತಿಪ್ಪ ಹೊಳೆವ ರತುನ ಮಕರ ಕುಂಡಲ್ಗಳ
ಬೆಳಗಿಲಿಪ ಕಪೋಲದ ಕಾಂತಿ ಪವಳದುಟಿಯಲ್ಲಿ ಬಿಂಬಿಸಲು
ನಳಿನದಳವ ಪೋಲುವ ನೇತ್ರ ಭ್ರೂ ವಿಲಾಸಾಪಾಂಗದಿ ಕೊಳಲನಾದಿಪ
ತಳಿರು ಬರುವ ಮಲ್ಲಿಗೆಯಂತೆ ಗೊಂಚಲುಗಳ ಗುಂಜೆಮೊಂಗಲಿನ ೧

ವಾಮಬಾಹುವಿನಲಿ ವಾಮಗಂಡವಿಟ್ಟು ಹೇಮವೇಣುರಂಧ್ರವ ಮುಟ್ಟಿ ಅಂಗುಲಿ
ನೇಮದಲಿ ಸರಿಗಮಪದನಿಯಾ ಮಂಜುಳ ಸ್ವರ ನುಡಿಸಲು
ರಾಮೆಯರಧರ ಸೋಮರಸವನ್ನು ಪ್ರೇಮದಿ ಸವಿವ ಶ್ರೀಮದ್ವೇಣುವಿಲಿ
ಈ ಮಹಾಭಾಗ್ಯವ ಕಾಮಿನೇರ್ನೋಡಿರೆಂದು ಮಾತನಾಡುವರ್ ರಾಮೆಯರು ೨

ಬ್ರಹ್ಮಗಂಧರ್ವಗಾನವಿಸ್ಮರುವಾ ಗೀತ ಅಪ್ಸರ ಗಂಧರ್ವರಪ್ಸರ ನಾರೇರು
ಉಮ್ಮಯದಿಂ ಕೇಳಿ ಸಮ್ಮೋಹಿಸಿದರು ಈಮ್ಮಹಿಯ ವ್ರಜರಮ್ಮಣೇರು
ಬ್ರಹ್ಮಗಚ್ಚರಿಯು ರಮ್ಮೆಯರನ್ನ ಸನ್ಮಾರ್ಗಿಯಾ ವೇಣುಸುಮ್ಮೂರ್ಛೆಯಿಂ ಕೇಳಿ
ಸುಮೃಗ ಪಕ್ಷಿಗಳ್ ತಾಮ್ಮರುಳಿಟ್ಟಿವು ರಮ್ಯಾರಣ್ಯದಿ ತಂತಮ್ಮೊಳು ೩

ಜೊತೆ ಪ್ರವಾಳ ಬರ್ಹೋತ್ಪಲ ತಾವರೆ ಪ್ರೀತಿಲಿ ಮುಡಿದ ನಾಥಗೋಪಾಲನ
ಗೀತಕೆ ಭೂರುಹವ್ರಾತ ಲತೆಗಳು ಸೋತು ಅಶ್ರುಮೋಕ್ಷವಾತವವು
ಆತನ ನೀಲ ಜೀಮೂತಾಂಗ ವೀಕ್ಷಿಸಿ ಪ್ರೀತ ನವಿಲ್ಗಳ ಯೂಥವು ನರ್ತಿಸೆ
ಶ್ರೋತ್ರರಕಮೃತವಾತ ಮಲ್ಲಿಗಳು ಜಾತಾನಂದದಿಂದ ಕೂತವಂದು ೪

1 + ಗ

ಗೋವಿಂದಾಟವಿಲಿ ಗೋವಿಂದಗಳನು ಕಾಯುತ ಸ್ವರ್ಣಮಯ ವೇಣುನಾದಿಸೆ
ಆವು ಕಿವಿಗೊಟ್ಟು ಮನವನು ಕಟ್ಟಿ ತಾ ವತ್ಸವಂ ಬಿಟ್ಟು ಹುಚ್ಚನಿಟ್ಟು
ಆ ವೀಕ್ಷಿಸಿ ಕೃಷ್ಣಾನನಾಬ್ಜಸುಧೆಯ ಸೇವಿಸಿ ನೇತ್ರದಿ ತೀವಿದಾನಂದದಿ
ತಾವಶ್ರುಗರೆವವು ಭಾವುಕ ಜನರ ಭಾವದಿ ಕಾಂಗೋಲಗ್ರೀವವೆತ್ತಿ ೫

ದೇವನಾರಿಯರ ನೀವಿ ಸಡಿಲ್ದುವು ಭಾವೋರ ಮುಡಿಯ ಪೂವು ಚೆಲ್ಲಿದವು
ಭಾವಜನಂಬಿಗೆ ಅವರಂಗಸ್ಪೃಷ್ಟಿಟ್ಟು ಶ್ರೀ ವೇಣುವಿನ ರಸವನುಂಡು
ಗೋವರ ಸುಕೃತ ವಾವುದೊ ರಂಗನ್ನ ಸೇವಗೆ ಸನ್ನದ್ಧಳಾದಳೆ ಕಾಳಿಂದಿ
ತಾ ವೇಗ ಬಿಟ್ಟು ಮಿಗೆ ಬಾಷ್ಪದಲಪ್ಪಿದಳ್ ದೇವನಂಘ್ರಿವನಜವನಂದು ೬

ಶ್ರೀವರ ಶ್ರೀಕೃಷ್ಣಾಟವಿಯ ಸಂಚರಿಸುವಾಗ ಪಾದರಾಜೀವದ ಗಂಧವು
ಭೂವಿಯ ತೃಣದಿ ಸವ್ಯಾಪಿಸಿರಲು ದೇವಪುಳಿಂದೆಯರಾವದನು
ಗ್ರೀವ ಕುಚವಲಿಟ್ಟು ವಾಸುದೇವನ ಪಾವನ ಚರಿತ್ರೆ ಭಾವಭರಿತರಾ
ಗಾವಳಿ ಮಾರ್ಗದಿ ಕೋವಿದರ್ಸ್ತೋಳಿವರ್ ದೇವಗಂಧರ್ವರ ರೀತಿಯಲಿ ೭

ಮೇಘಶ್ಯಾಮಲನ ರಾಗರಸಾಮೃತ ಭೂಗಗನ ತುಂಬಲಾಗ ದೇವರ್ಕಳು
ಆಗಸದಿಂ ಪೂವಾ(ಮ?)ಳೆಗರೆವರರ್ಥಿಯಾಗಿರೆ ಸಾಧುಗಳೌಘ ಕಂಡು
ಮೇಘಾಳಿ ರಂಗನ ಮೇಗಾತಪತ್ರಂಗಳಾಗಿರ್ದವಲ್ಲಿಯ ಗೋಗೋಪ ಗೋಪೇರು
ಆ ಗೋವರ್ಧನಾದ್ರಿ ಭಾಗದೇಯಕೆ ತಲೆದೂಗಿದರು ಸ್ವರ್ಗಾಗಾರೆಂದು ೮

ಅನಂತ ಬ್ರಹ್ಮಾಂಡವನ್ನಾಳ್ದ ದೇವ ಗೋ ಕಾನನದಟಣೆ ಗೋನೀಕ ರಕ್ಷಣೆ
ಮಾನವ ಲೀಲೆಗದೇನು ಭೂಷಣವೊ ತಾನಣ್ಣನೊಡನೆ ವಿನೋದಕೆ
ಆ ನಂದ್ಯಶೋದೆಯ ಸೂನುವೆನಿಸಿದ ಆನಂದ ಶತಕನನಾದಿ ಜನಕ
ಶ್ರೀನಾಥ ಗೋಪಕಾಮಿನಿಯರಾಳ್ವ ದಯಾನಿಧೆ ಪ್ರಸನ್ವೆಂಕಟ ಕೃಷ್ಣ ೯

## ೩೩
## ವಸ್ತ್ರಾಪಹರಣ

ರಾಗ : ರಾಮಕ್ರಿಯಾ                ತಾಳ : ಅಟ್ಟ

ಹೈಮಂತದ ಪ್ರಥಮಮಾಸದಿ ಶ್ರೀ ಸೋಮಶೇಖರನರ್ಧಾಂಗಿಯ ಹೊಂದಿ
ಸೀಮಂತಿನಿಯರರ್ಚಿಸಿದರಂದು ನಿತ್ಯ ಯಮುನೆಯ ವಾರಿಲಿ ಮಿಂದು- ೧

ಮಳಲಗೌರಿಯ ಮಾಡಿ ನೋಂತರು ಮಂಗಳ ಹವ್ಯಾನ್ನವನುಂಡು ಕಾಂತೇರು
ಫಲಪುಷ್ಪ ಗಂಧಮಾಲಿಗಳಿಂದ ಕಂಪಳಿಲು ಧೂಪದೀಪ ಬಲಿಯಿಂದ ೨

ನಂದನಾತ್ಮಜ ತಮ್ಮ ಪತಿಯಾಗಬೇಕೆಂದುಮೆಯನು ಬೇಡಿದರಾಗ
ಸುಂದರ ಕಾತ್ಯಾಯನಿಯರ್ಚನೆ ಭಕ್ತಿಯಿಂದ ಪ್ರದಕ್ಷಿಣೆ ವಂದನೆ ೩

ಉಚ್ಚ ಪಾಡಿ ಹರಿಗುಣಕೀರ್ತನ್ನ ಮತ್ತೆ ನಿಚ್ಚ ನಿಚ್ಚಂಬಿಕೆಯಳ ಪ್ರಾರ್ಥನ್ನ
ಅತ್ಯಂತ ಯಾಚ್ನೆಯ ತಿಳಿದನು ಈ ಅಚ್ಯುತನಲ್ಲಿಗೆ ಬಂದನು ೪

ಯೋಗಿಜನೇಶ್ವರ ಕಂಡನು ಅವರ್ ನೀಗಿದಂಬರವೆತ್ತಿಕೊಂಡನು
ಭಾಗ್ಯೆಯರ್ ಮಿಂದು ಬಾಹನ್ನಕ ಕೃಷ್ಣ ವೇಗದಿ ನೀಪವಡರಿ ನಕ್ಕ ೫

ಪೋಗುವ ಬಾಲೆರ ನೋಡಿ ನಗುತಿದ್ದ ಬಲು ಸುಗುಣೇರು ಬನ್ನಿರಿಲ್ಲಿಗೆಯೆಂದ
ತೆಗೆದುಕೊಳ್ಳಿರಿ ನಿಮ್ಮಾಂಬರವೆಂದ ನರ್ಮಂಗಳ ಮಾತಿಲಿ ಶ್ರೀ ಗೋವಿಂದ ೬

ನಿಮ್ಮ ನಿಮ್ಮುಡಿಗೆಯನು ನಿಮಗೀವೆ ಬನ್ನಿ ಶ್ರಮವೇಕೆ ನೀರೊಳಗೆ ನೀವೆ
ಹಿಮವು ವ್ರತಸ್ಥೆಯರಿಗೆ ಕಷ್ಟ ಆಕ್ರಮವಿನ್ನು ಆಕಟಾಯೆಂದನು ಕೃಷ್ಣ ೭

ಕಾಮಜನಕನ ನರ್ಮಕೆ ನಾಚಿ ಆ ಕಾಮಿನಿಯರಿಗೆ ಕಾಮವು ಹೆಚ್ಚಿ
ಶಾಮಸುಂದರ ನಿನ್ನ ದಾಸೇರು ಎಲೆ ಸ್ವಾಮಿ ನಾವು ವಿವಸ್ತ್ರೆಯರು ೮

ಅಚ್ಯುತ ನಮ್ಮುಡುಗೆಯ ನೀಡ್ಯೆ ನಿಮ್ಮಿಚ್ಛಾನುಗೆಯರು ಕನ್ಯೆರು ನೋಡ್ಯೆ
ಸಚ್ಚಿದಾನಂದ ನಂದಜ ಸಾಕು ಶ್ರೀ ವತ್ಸಲಾಂಛನ ಬಿನ್ನಹ ಪರಾಕು ೯

ಕೋಮಲೆಯರು ಬಲು ತೋದೆವು ಧರ್ಮಧಾಮ ಚಳಿಗೆ ಮುಟ್ಟಿಗಾದೆವು
ಸ್ವಾಮಿ ನಂದಗೆ ಹೇಳ್ವೆವು ಕೇಳ್ಯೆ ನಿಮ್ಮ ಕಾಮಿಸುವೆವು ವಸ್ತ್ರವ ನೀಡ್ಯೆ ೧೦

ದಾಶಾರ್ಹ ಕನ್ಯೆರಿಗೆಂದನು ವ್ರಜೇಶಗೆ ಹೇಳಿ ಮಾಡುವುದೇನು
ದಾಸೇರಾದರೆ ಬನ್ನಿ ಬಳಿಗೀಗೆ ನಿಮ್ಮ ವಾಸಂಗಳನು ಕೊಡುವೆನು ಬ್ಯಾಗೆ ೧೧

ಶೀತದಿಂದೆರಡು ಅಂಗ್ಯೆ ಹಚ್ಚಿ ರತಿನಾಥನ ಸದನದ ಕದಮುಚ್ಚಿ
ಸೋತು ಲಜ್ಜೆಯನೀಗಿ ಮುಖದಲಿ ಕಾಳಿಂದಿತೀರ್ಥ ಉಳಿದು ಹರಿಯಿದ್ದಲ್ಲಿ ೧೨

ಬಂದು ಭೂರುಹದೆಡೆ ನಿಂತಿಹ ಬಂದ ಸುಂದರಿಯರ ಭಾವ ತಿಳಿದಿಹ
ಇಂದುಮುಖಿಯರ ದಿವ್ಯಾಂಬರ ತನ್ನ ಸ್ಕಂದದಲಿಟ್ಟ ವಿಶ್ವೇಶ್ವರ ೧೩

ಸ್ನೇಹಾವಲೋಕದಿ ನೋಡಿವಾ ವಸ್ತ್ರದೇಹಿಕರೊಳು ಮಾತನಾಡಿದ
ಹೇ ಹರಿಣಾಕ್ಷೇರೇ ಕೇಳಿರೆ ಅಂಬುಜಾಪೇಳಿಸವ ಮಾಳ್ಪ ಚೆಲುವೆಯರೆ ೧೪

ನಗ್ನ ವಿಂದಪರಾಧ ಕ್ಷಮಿಸೆಂದು ಕರಯುಗ್ಮವ ಮುಗಿದು ಬೇಡಿರಿ ಬಂದು
ವಿಷ್ಣೇಶನಮ್ಮಗೆ ಬೇಡಲು ನಿಮ್ಮ ನಘಾಂಬರವೀವೆ ಈಗಲು ೧೫

ಕೇಳಿ ಕೆಲದೆರೊಂದು ಕರದಲಿ ಇಂದು ಮೌಳಿಯರ್ಥಾಂಗಿಗೆ ನಮಿಸಲಿ
ಶ್ರೀಲೋಲನಪತಿರಾಸ್ಕರಿಸಿದ ಎರಡು ತೋಳೆತ್ತಿ ನಮಿಸಿ ಪ್ರಾಂಜಲಿಲಿಂದ ೧೬

ಎಂದ ಮಾತಿಗೆ ಲಜ್ಜಿಸಿದರು ಬಾಹು ದ್ವಂದ್ವವೆತ್ತ್ಯಭಿವಂದಿಸಿದರು
ಇಂದಿರೇಶಗೆ ವಸ್ತ್ರ ಜೇಡಲು ಪ್ರೀತಿಯಿಂದಿತ್ತ ಬೇರೆ ಬೇರೆ ದಯಾಳು ೧೭

ತಮತಮ್ಮಾಂಬರವನು ಉಟ್ಟರು ಶ್ರೀ ಕಮಲಾಕ್ಷನಲಿ ದೃಷ್ಟಿಯಿಟ್ಟರು
ಸುಮುಖಿಪ ಲಜ್ಜೆಯಿಂದೀಕ್ಷಿಸಿ ಶ್ರೀರಮಣನ ಸಂಗವಪೇಕ್ಷಿಸಿ ೧೮

ನವಸಂಗಮದೋರೆ ಸೋಟದಿ ಅಂಘ್ರಿವನಜ ಸ್ಪರ್ಶೇಚ್ಛೆಯನು ಹೊಂದಿ
ದ್ಯುಪತೆ ವತ್ಸರ ನೋಡಿದ ಸಂವರಸವಾರ್ಧಿಲಿ ರಮಿಸಿದ ೧೯

ವೇದೋಕ್ತಿಯಂತೆ ಕಾಮಿನಿಯರ್ಕಾಮವಿತ್ತ ವೇದೇಶ್ವರನು ಪೂರಣಕಾಮ
ಬೋಧಿಸಿದನು ತನ್ನರ್ಚನೆ ಫಲ ಪ್ರಾಪ್ತವಾದುದು ನಡೆಯಿರೆಂದ ಶ್ರೀಲೋಲ ೨೦

ನಂದಜನಾಜ್ಞದಿ ಬಂದರು ತಮ್ಮ ಮಂದಿರಕೆ ಚಂದ್ರಮುಖಿಯರು
ಸುಂದರ ಪ್ರಸನ್ವೆಂಕಟೇಶನ ನಂಬಿ ನಂದಿಸಿದರು ಕನ್ಯೆರನುದಿನ ೨೧

## ೩೪

**ರಾಗ : ರಾಮಕ್ರಿಯಾ** **ತಾಳ : ಅಟ್ಟ**

ವರ್ಣಿಪ ಕವಿಗಳಿಂದ ಉಘೇ ಸುಖಾರ್ಣವ ಮುಂದೋರುವುದುಘೇ ಪ.

ಇಂದಿರೆಯರಸನು ವೃಂದಾವನ ಉಳಿದೊಂದಿ(ದುದಿ?)ನ ದೂರೈದಿದನು ಗಡ
ಸಂದಟಿಸಿದ ತರುವೃಂದವು ಛತ್ರಗಳಂದಾಗಲಿ ಹರಿ ತುಶಿಪ ಗಡ ೧

ಕೇಳ್ಳೆ ಸುಬಲ ವಿಶಾಲ ಸ್ತೋಕಬಾಲ ಶ್ರೀದಾಮ ಗೋಪಾಲ ರುಕ್ಷಾ
ಕೇಳ್ಳೆ ಸುರಪ್ರಸ್ಥಾಲತೆ ತರುಗಳು ಕಾಲಕಾಲಕತಿ ಉಪಕರಿಸುತಿವೆ ೨

ಧಾಳಿ ಬಿಸಿಲು ಬಿರುಗಾಳಿ ಸಿಡಿಲು ಮಳೆ ಕಾಳಗಿಚ್ಚು ಚಳಿಗಾಲವನು
ತಾಳಿ ಮನುಷ್ಯರ ಜಾಲಕಾಶ್ರಯವಾಗಿ ಮೇಲೆ ನಮ್ಮಾಪ್ತರಂತಿಹವಹುದೆ ೩

ಫಲ ಕುಸುಮಂಪ್ರ ಎಳೆದಳಿಲಿಂ ಘನಗಂಧ ಸಲೆ ಕಂದಮೂಲತ್ವಚೆಗಳಿಂದ
ಬಲು ಪ್ರಾಣಿಗಳನು ಸಲಹುತಲಿವೆ ಹಿಂಗಿಳೆಯಲಿ ಗೃಹಮೇಧಿಗಳಾಗಿ ೪

ಔಚಿತ ಕರ್ವರ್ಣಾದಿ ಯಾಚಿಸಿವರ್ಧಾದಿ ಯಾಚಕರ ಕರೆದು ಅರ್ಚಿಸುವ
ಆಚಾರಾನ್ವಿತರೆ ಚತುರ್ವಿಧ ಮುಕ್ತಿಗೋಚರರೆ ಪ್ರಿಯ[1][ರು][1] ನಮಗೆ ೫

ಶ್ರುತಿಬಳಿಗೆಳೆವರು ಅತಿಥಿಗಳ್ ಭಜಕರು ಕ್ಷಿತಿಭೂಷಣರ್ ಧನವಜ್ಞನರು:
ಸ್ಮೃತಿಗರ್ಹರು ಪರಸತಿಧನವಿರತರು ಸತತ ಸತ್ವಭಗರು ಮತ್‌ಪ್ರಿಯರು ೬

ಮತ್ಕಥಾಶ್ರವಣ ಸಂಕೀರ್ತನೆ ಸ್ಮರಣೆ ಮತ್ಪದಸೇವನೆ ನಿತ್ಯಾರ್ಚನೆ
ಮತ್ತಭಿವಂದನೆ ದಾಸ್ಯಸಖಿತ್ವವು ಆತ್ಮನಿವೇದನೆ ಭಕ್ತಿ ಮುಕ್ತಿ ೭

ಎನಗೆ ಪ್ರಕೃತಿ ಸ್ತ್ರೀ ವನಜೋದ್ಭವಸುತ ತ್ರಿನಯನ ವಿಹಾಹಿಪ ತನುಜರು
ಅನಿಮಿಷಪತಿ ನಕ್ಷತ್ರ ಸುರಋಷಿ ನೃಪ ಜನಸೇವಕರೆಂಬುವ ಮುಕುತ ೮

ಸೃಷ್ಟ್ಯಾದಿಕಾರಣ ಶಿಷ್ಟಸಂರಕ್ಷಕ ದುಷ್ಟಹರಣನಾ ತುಷ್ಟಿತನು
ಸೃಷ್ಟ ಮಹಿಮ ಯಥೇಷ್ಟ ನಿಗಮವೇದ್ಯ ವಿಷ್ಣು ಕೃಷ್ಣನೆಂಬುವ ವೈಷ್ಣವನು ೯

ಈ ಲಸದ್ವರ್ಮ ಪ್ರತಿಕೂಲರೆ ಅಧಮರು ಭೂಬಲನೆಗೆ ಭಾರಕರವರು
ಹೇಳಲೇನವರ ಜನ್ಮಾಳಿಗಳ್ ತರುಲತೆಗಳಿಲು ನಿರಯದ ಪಾಲವರು ೧೦

ಫಲ ಪೂ ಗೊಂಚಲಿಂ ತಲೆಬಾಗಿಹ ತರುಗಳ ಮಧ್ಯ ಯಮುನಾ ಜಲವೀಂಟಿ
ತಳಿತುಪವನದಲಿ ಗೆಳೆಯರು ಹಸಿದು ಶ್ರೀ ಬಲಪ್ರಸನ್ವೆಂಕಟಗೆ ಪೇಡಿದರು ೧೧

## ೩೫

## ಸತ್ರದಡಿಗೆಯ ಊಟ

ರಾಗ : ಸೌರಾಷ್ಟ್ರ ತಾಳ : ಏಕತಾಳ

ಮಹಾ ಬಾಹುಶಾಲಿ ಕೇಳಂ ರಾಮಾ ರಾಮ ದುಷ್ಟ
ವಾಹಕ ಶ್ರೀಕೃಷ್ಣ ಕೇಳ್ ಪೂರ್ಣಕಾಮಾ
ಬಹಳ ಬಾಧಿತರಾದೆವು ಕ್ಷುಧೆಯಲೀಗ ನಿರು
ವಾಹ ನಿಮ್ಮಿಂದಲೆಂವರ್ ಗೋವರಾಗ ೧

1 ರೇ

ಹೀಗೆಂಬ ವಿಜ್ಞಾಪನೆಯ ಕೇಳಿ ಶೌರಿ ದಯಾ
ಸಾಗರ ನಿರೂಪಿಸಿದ ದುಃಖಹಾರಿ
ಯಾಗಶಾಲೆಯಲ್ಲಿ ಸತ್ರವೆಂದು ನೀವು ಪೋಗಿ
ಯಾಗಿಗಳಿಗನ್ನ ಬೇಡಿ ಪೇಳ್ದನಾಪ್ತ ೨

ಯಜ್ಞಪತಿಯಾಜ್ಞೆಯಿಂದ ಯಜ್ಞಕೈದಿ ವಿಪ್ರ
ವರ್ಗೆ ಅನ್ನವ ಬೇಡಿದರ್ ಸುವಿನಯದಿ
ಸ್ವರ್ಗಕಾಮಕರ್ಮಠರವರು ಮತ್ತರಾಗಿ ಖಳ
ರ್ಗೆ ಗರ್ಜಿಸಿದರು ವಿನಯವ ನೀಗಿ ೩

ಕಾಲವಲ್ಲವೆಂದು ನಾಸ್ತಿಕರು ನುಡಿಯಲು ಗೋ
ಪಾಲಕರು ತಿರುಗಿ ಬಂದು ಹರಿಗೆ ಪೇಳಲು
ಬಾಲೆಯರಿಗೆ ಬೇಡಿ ಪುರುಷರನ್ನು ಬೇಡದೆ ಯಾಗ
ಶಾಲೆಗೈದಿ ಪುನರಪಿ ಅನ್ನ ಬೇಡಿದರಂದೆ ೪

ಕೃಷ್ಣನಾಜ್ಞೆ ಕೇಳಿ ಬಾಲೆರು ಹೃಷ್ಟ ಮನದಲಿ ಶ್ರೀ
ಕೃಷ್ಣನ್ನ ಸಂದರ್ಶನಾಶೆ ಮಾಳ್ಪಭರದಲಿ
ಮೃಷ್ಟಾನ್ನೋದನ ಭಕ್ಷ್ಯಪಾಯಸಾಜ್ಯಕ್ಷೀರವು ಯ
ಥೇಷ್ಟ ಶಾಕ ಪಪ್ಪಡ ಪಳಿದ್ಯ ದಧಿ ವ್ಯಂಜನವು ೫

ತಂಡ ತಂಡದ್ಪರಿವಾಣಗಳ ಚಷಕದೊಳಗೆ ತುಂಬಿ
ಕೊಂಡು ಬಂದರಿಂದುವದನೇರ್ಹರಿಯಿದ್ದೆಡೆಗೆ
ಗಂಡರ ಮಕ್ಕಳ ಆಪ್ತರೆಲ್ಲರ ಬಿಟ್ಟು ಶ್ರೀ
ಪುಂಡರೀಕನಯನನಂಘ್ರಿಯಲ್ಲಿ ಚಿತ್ತಿಟ್ಟು ೬

ಬ್ರಾಹ್ಮಣೆಯರು ಷಡ್ರಸದನ್ನ ತಂದು ನಮಿಸಲು ಪರ
ಬ್ರಹ್ಮನುಂಡ ಗೋಪಾಲಕರ ಕೂಡಿ ದಯಾಳು
ಬ್ರಹ್ಮಜ್ಞ ನಾರಿಯರ ಭಕ್ತಿರಸವನುಂಡನು ಅವರ್ಗೆ
ಬ್ರಹ್ಮ ನಿರ್ವಾಣವನಿತ್ತ ಪುರುಷಶೌಂಡನು ೭

ಮತ್ತೊಬ್ಬಳು ಬಾಹಸ್ನಕ ಗಂಡ ತರುಬಲು ಆಕೆ
ಮುಕ್ತಿಪತಿಯ ನೆನೆದು ತನ್ನ ಪ್ರಾಣಬಿಟ್ಟಳು
ಇತ್ತ ಯಜ್ಞಪತ್ನಿಯರನ್ನವಿತ್ತು ಕೃಷ್ಣನ ಗುಣ
ಕೀರ್ತನೆ ಪಾಡಿ ಪರವಶದಲ್ಲಿದ್ದರಾದಿನ ೮

ಗೋಗೋಪರ ಚರಿಸಿ ಕೃಷ್ಣ ವ್ರಜಕೆ ತೆರಳಲು ಈ
ನಾಗಗಮನೆಯರ್ದೃಷ್ಟಿ ಮುಂದಕ್ಕೋಡದಿರಲು
ಯೋಗಿಧ್ಯೇಯ ವಿಶ್ವನಾಥನವರ ಮನ್ನಿಸಿ ಪೋಗ
ಲಾಗ ನಾರಿಯರ್ ತಮ್ಮತಮ್ಮ ವಾಟ ಹೊಂದಲು ೯

ಯಜ್ಞ ದೀಕ್ಷ ಮುನಿಗಳವರ ಭಾವವರಿತರು ತಮ್ಮ
ಅಜ್ಞ ವೃತ್ತಿಯನ್ನು ನೆನೆದು ಖಿನ್ನರಾದರು
ಯಜ್ಞೇಶ್ವರರಿಗೀಶ್ವರನವಜ್ಞ ಮಾಡಿದ ಅಸ
ಭಿಜ್ಞರಾವು ನಮ್ಮ ಕರ್ಮ ಧಿಗಧಿಗೆಂದರು ೧೦

ತಮ್ಮ ಹೆಂಗಳ ಸುಕೃತಕ್ಕೆ ಒಪ್ಪಿಕೊಂಡರು ಇನ್ನು
ನಮ್ಮ ಜ್ಞಾನಯೋಗ ತಪವು ಸುಡುಸುಡೆಂದರು
ಬ್ರಾಹ್ಮಣರು ಪಶ್ಚಾತ್ತಾಪರಾಗಿ ನುಡಿದರು ಪೂರ್ಣ
ಬ್ರಹ್ಮ ಪ್ರಸನ್ವೆಂಕಟಕೃಷ್ಣನ ಒಲಿಸಿಕೊಂಡರು ೧೧

## ೩೬

## ಗೋವರ್ಧನೋದ್ಧಾರ

ರಾಗ : ಘಂಟಾರವ ತಾಳ : ಅಟ್ಟ

ನಿತ್ಯೋತ್ಸವ ಪುಣ್ಯಸಂಕುಲ ನಂದಗೋಕುಲ ನಂದಪುತ್ರನ ಲೀಲಾ
ಸ್ತೋತ್ರವ ಪಾಳ್ಪರ್ಗೆ ಕಡೆಯಿಲ್ಲ ಶೇಷಗಳವಲ್ಲ ದುಷ್ಟದೈತ್ಯಹೃತ್ಶೂಲ
ಭೃತ್ಯದೇವಾನ್ವಯಪ್ರತಿಪಾಲ ವೇಣುಗೋಪಾಲ ವಿಕ್ರಮತ್ರಯಶೀಲ
ಮುಕ್ತಾಮುಕ್ತಾಮರಜನಧ್ಯೇಯ ಮುನಿಕುಲಗೇಯ ೧

ಗೋಷ್ಪದ ಜನರೆಲ್ಲ ಒಂದಿನ ದೇವೇಂದ್ರನ ಅಬ್ದತುಷ್ಟಿಗುತ್ಸವದಿ
ಮೃಷ್ಟಾನ್ನಪಾನ ಸಿದ್ಧವ ಮಾಡೆ ಇತ್ತತ್ತೋಡ್ಯಾಡೆ ಶ್ರೀಕೃಷ್ಣ ನಿಂದಿಸಿದ
ಇಷ್ಟಾರ್ಥವೀವ ಗೋವರ್ಧನಗಿರಿವೃದ್ಧನು ಈತಗಿಷ್ಟು ಪೂಜೆಯನು
ಶಿಷ್ಟರು ಮಾಡ್ವೆಂದಾಜ್ಞಾಪಿಸಿದ ಬುದ್ಧಿಗಲಿಸಿದ ಗಿರಿಗಿಟ್ಟು ಉಣಿಸಿದ ೨

ಬಹುಗುಣೋಪೇತಾನ್ನವುಂಡನು ಗೂಢಲಿಂಗನು ಆ ಮಹೀಧ್ರ ಪೊಕ್ಕನು
ಮಹಾವಿಶ್ವತತ್ವವ ತೋರ್ದನಾ ಜನಾರ್ದನ ಕಂಡ ಸಹಸ್ರಾಕ್ಷ ಇದನು
ಬಹುಕೋಪ ತಾಳ್ದನು ಘನವೊತ್ತಕಾಜ್ಞೆಯನಿತ್ತ ಸಪ್ತಾಹ ಮಳೆಗರೆದ
ಶ್ರೀಹರಿಯೆ ಕೃಷ್ಣನೆಂಬುದು ಮರೆತೈಶ್ವರ್ಯೋನ್ಮತ್ತ ಪ್ರಳಯದಹನಯಿಂದ ೩

ಆಕ್ರಂದಿಸಿದ ಪ್ರಾಣಿಗಳನ್ನೆಲ್ಲ ನೋಡಿ ಸಿರಿನಲ್ಲ ಪರಾಕ್ರಮಶೀಲ
ನಕ್ಕು ಸತ್ವರಪಲ್ಲವದಿಂದ ಗಿರಿಯೆತ್ತಿದ ಚಿಕ್ಕ ಮಕ್ಕಳುಪ್ಪಿಲೀಂದ್ರ
ನಕ್ಕತ್ತಾಡುವಂತೇಳ್ದಿನ ಮತ್ತೆಸೂದನ ತನ್ನ ಒಕ್ಕಲುಳಿಸಿದ
ಆಕ್ಕರದಿ ದೀನವತ್ಸಲ ಜಿತಖಳಜಾಲ ಇಂದ್ರನುಕ್ಕನು ಮುರಿದ ೪

ಆರೊಂದಿನಿಂದ್ರ ಘೋರಮಳೆಗರೆದ ಪರಿಯೆಲ್ಲರ ಪೊರೆದ ನಿತ್ಯಭೂರ್ಯನ್ನಪಾನ
ಚಾರುಶಯ್ಯಾಸನಪತ್ರನು ವಿಶ್ವಕರ್ತನು ಶ್ರೀನಾರಾಯಣನು
ಸಾರಿದ ಸಜ್ಜನರನು ಕಾವ ಮೊದ್ವಾದ್ವರ ದೇವ ಸಾಸಿರನಯನನು
ಶ್ರೀರಮಣನ ಮಹಿಮೆ ನೋಡಿದ ಮೈಯಿಮಾಡಿದ ಇಳೆಯುಸಾರಿ ಸ್ತುತಿಸಿದ ೫

ಪ್ರಿಯೋಕ್ತಿಗಳ ರಚನೆಯಿಂದ ಉಪಾಸನದಿಂದ ಸಾಧುಪ್ರಯೋಗವಿಂದ
ನಾಯೀನನರಿಯೆ ನಿನ್ನಪೊದದ ತನ್ನ ಸಲಹೆಂದ ವಿಧಿವಾಯು ಭವಾದ್ಯಮರ
ನಾಯಕ ಜನಕೆಲ್ಲ ಗುರು ನೀನು ಬಾಲಕ ನಾನು ಜಗನ್ನಿಯಾಮಕನು
ನೀಯಾಕಳ ಕಾವ ಬಗೆ ಹೇಳೊ ಮಹಾದಯಾಳೊ ಎನ್ನಯ ತಪ್ಪುತಾಳೊ ೬

ವೇದಕ್ಕೆ ನಿಲುಕದ ಗುಣವಾರಿಧಿ ವಿಶ್ವಕ್ಕೆ ಕಾದಿ ವೇದೋದರಜನಕ
ಆಧಾರ ಪೋಷಕ ಶಿಕ್ಷಕ ಮೋಕ್ಷದಾಯಕ ನಿನ್ನ ಸದೃಶರಾರಿಲ್ಲ
ಅಧಿಕರ್ಕಾಲತ್ರಯದಲಿಲ್ಲ ಲಕುಮಿಯು ನಲ್ಲ ನಿನ್ನ ಹೊರತಾರಿಲ್ಲ
ಈ ದತ್ತ ಸಿರಿಯಿಂದ ಉಕ್ಕಿದೆ ಮದಸೊಕ್ಕಿದೆ ಬಂದು ಪಾದಕೆರಗಿದೆ ೭

ಕ್ಷಮಿಸೆನ್ನವಗುಣ ದಯಮಾಡ್ಯೆ ಕೃಪೆಯಲಿ ನೋಡ್ಯೆ ಪಾದಕಮಲವಾಶ್ರೈಸಿದೆ
ಕುಮತಿ ನಿನ್ನ ಪರನು ಕೆಡಿಸಿದೆ ಕೇಡನೆಣಿಸಿದೆನೆಂದು ಅಮರೇಂದ್ರ ತುತಿಸಿ
ನಮಿಸಿ ನಮಿಸಿ ತಾ ನುಡಿಯಲು ಕೃಷ್ಣ ದಯಾಳು ತಾ ಕ್ಷಮಿಸಿ ನುಡಿದನು
ಅಮರೇಶ ನಿನ್ನರ್ಚನೆ ಕೆಡಿಸಿದೆ ಮದವಿಳಿಸಿದೆ ಇನ್ನು ಭ್ರಮೆ ಬೇಡೆಚ್ಚರವು ೮

ಸುರಭಿ ಪಯೋಧರ ತೊರೆದಳು ಮಳೆಗರೆದಳು ಶ್ರೀಹರಿಗಭಿಷೇಕ
ಪರಮ ಭಕುತಿಯಿಂದೆರೆದಳು ಸ್ತುತಿ ಮಾಡ್ದಳು ನಮಿಸಿ ಸುರಪತಿಯೊಡನೆ
ಸುರಲೋಕಕ್ಕೈದಿದಳ್ ಮಾನಿಯು ಹವಿರ್ದಾನಿಯು ಈ ಹರುಷವಾರಿಧಿಯು
ವರಗೋಕುಲಸ್ಥರ ಸುಖಿಸಿತು ನಿತ್ಯ ನಲಿಸಿತು ಶ್ರೀಪರಸನ್ವೆಂಕಟದಯದಿ ೯

## ೩೭

## ವರುಣಪಾಶ ಬಂಧಮೋಚನ

**ರಾಗ : ತೋಡಿ** **ತಾಳ : ಏಕತಾಳ**

ಹರಿಪ್ರವಣರು ಗೋಪಾಲಕರು ಶ್ರೀ
ಹರಿಕಥಾಮೃತ ಪ್ರತಸ್ತುತಿರತರು ಪ.

ಕಾಯುವ ಕೇಳ್ವವ ಕೊಯುವ ಕೊಡುವವ
ಸಂಭಾಷಣ ಪ್ರಾಣ ನಡೆ ಶ್ವಾಸ
ಸಂಭ್ರಮ ಮನೋರಥೇಷ್ಟ ವಸ್ತ್ರಾತ್ರಯ
ಅಂಬುಜನಾಭನಾಗಿಹರು ೧

ಕರಣತ್ರಯವು ಸುಕೃತ ದುಷ್ಕೃತ ಬಂಧಕವು
ಪರಮಪದವು ಸತ್ವಾತ್ರಯವು
ಹರಿಯಧೀನವು ಸಿರಿಸರಸಿಜಭವ
ಪರಸುರರ್ ಹರಿದಾಸರೆನುತಿಹರು ೨

ಗೋದೋಹನ ರಕ್ಷ್ಯದಯ ದಧಿಮಂಥನ
ಮೋದಗೃಹದ ಕೃತ್ಯಾದಿಯಲಿ
ಶ್ರೀಧರ ಬಲಭದ್ರರೌದಾರ್ಯ ವಿಕ್ರಮ
ಆದರದಲಿ ನಿತ್ಯ ಪಾಡುವರು ೩

ಪರಿದಿನ ನಿರಶನ ನಿರ್ಜಲವ್ರತದಲಿ
ಹರಿಜಾಗರ ಮಾಡಿ ವ್ರಜನಾಥ
ವರ ಯಮುನಾಸ್ನಾನವ ಮಾಡುತಿರಲು
ವರುಣದೂತರು ಕಟ್ಟಿಕೊಂಡೊಯ್ಯಲು ೪

ಹೇ ಕೃಷ್ಣ ರಾಮ ಎನುತ ಕೂಗಿದರು ಅ
ನೇಕಾರ್ತಸ್ವರದಲಿ ಗೋವಳರು
ಶ್ರೀಕೃಷ್ಣ ಕೇಳಿ ವರುಣಾಲಯಕೈದಲು
ಶ್ರೀಕಾಂತನ ಕಂಡು ಪ್ರಣಮಿಸಿದ ೫

ತವ ಪಿತನ್ನರಿಯದೆ ದೂತರು ತಂದರು
ಭವಹರ ತ್ರಾಹಿ ತ್ರಾಹಿ ಪಾಹಿಯೆನುತ
ಸ್ತವಿಸಿದ ಈ ಘನ ಸವೆಯುವ ತಪ್ಪು ಕ್ಷಮಿ
ಸ್ಯವಲೋಕಿಸು ನಿನ್ನ ಭಟನೆಂದ ೬

ಇಂದೆನ್ನ ಜನ್ಮ ಸಫಲವು ಸರ್ವಸಿದ್ಧಿ
ಇಂದಿಗೆ ನಿನ್ನ ಪದವಾರಿಜವ
ಹೊಂದಿದೆ ನಮಿಸಿದೆ ಮಹಿಮೆಯನರಿಯದೆ
ತಂದರು ತಂದೆಯ ತಂದೆ ನಮೊ ೭

ಬಲು ಅಪರಾಧವ ಕ್ಷಮಿಸು ದಯಾನಿಧೆ
ಸಲೆ ನಿನ್ನ ಧ್ಯಾನ ಗ್ರಹಿಸು ಹರೆ
ಸಲಹೆನ್ನನು ಎಂದು ಬಹಳ ಭಕುತಿಯಿಂದ
ನಳಿನಭವೇಶನ ಪೂಜಿಸಿದ ೮

ಎನ್ನ ಸಂಶಯವೆಲ್ಲ ದೂರವು ಯದುಪತೆ
ಧನ್ಯನೆನಿಸಿದೆ ತವಾರ್ಚನೆಯಿಂ
ಎನ್ನುತ ಪುನಃ ಪುನಃ ಪ್ರಣಮಿಸಿ ರಮೆಯರ
ಸನ್ನುತ ಪ್ರಸನ್ನೀಕರಿಸಿದನು ೯

ಅಷ್ಟಂಗೆ ತಾನಭಯವನಿತ್ತು ಶ್ರೀಪತಿ
ಅಷ್ಟನಿಗಾಶ್ಚರ್ಯ ತೋರ್ದ ಹರಿ
ಒಪ್ಪುವ ಬಂಧು ಬಳಗಕೆಲ್ಲ ಹೇಳಿದ
ತಪ್ಪದೆ ನಂದವ್ರಜಕೆ ಬಂದು ೧೦

ಅತ್ಯಾನಂದದಿ ನುಡಿದರು ನಿನ್ನ ಮಗ
ಮುಕ್ತಾಮುಕ್ತವಂದಿತಚರಣ
ನಿತ್ಯಾನಂದನ ಈಶ್ವರತ್ವವ ನಾವ್
ಪ್ರತ್ಯಕ್ಷ ನೋಡಿದೆವೆಂದರವರು ೧೧

ತನ್ನೀಶ್ವರತ್ವದ ಬಗೆಯನು ತಿಳಿಯಬೇ
ಕೆನ್ನುವ ನಿಜಭಕ್ತ ಗೋವಳರ
ಬಿನ್ನಹವಾಲಿಸಿ ಬ್ರಹ್ಮ ಹ್ರದದೊಳು
ಚೆನ್ನಾಗಿ ಮುಳುಗಿಸಿ ತೋರಿದನು ೧೨

ಅವಿದ್ಯಾಕಾಮ್ಯ ಕರ್ಮವ ಮಾಡಿ ಬಲು ಬಲು
ಹೇವದಿಂ ಸ್ವರ್ಗಭವಕ್ಕೈದುತಿಹ
ಪ್ರಾವೃತರ್ಗಳಿಯುವ ಮೌನಿಜನಸ್ಥಳ
ದೇವ ತೋರಿದ ಅಪವರ್ಗವನು ೧೩

ಅನಂತ ಛಂದಸ್ಸುಗಳಿಂದ ಸ್ತುತ್ಯನನು
ಆನಂದ ಜ್ಞಾನಮಯ ರೂಪನನು
ಆ ನಂದಗೋವರಾನಂದದಿ ಕಂಡರು
ಆನಂದ ಯೋಗಮಯನಾಶ್ರಿತರು ೧೪

ಅತ್ಯದ್ಭುತ ಮಹಿಮಾತಿಶಯನು ಕೃಷ್ಣ
ಸತ್ಯೇಶ ಭವ ವಿಪಾಹಿಪರಿಂ ನುತನು
ನಿತ್ಯಾನಂದ ಪ್ರಸನ್ವೆಂಕಟಕೃಷ್ಣ
ಭಕ್ತರು ಜೀವನ್ಮುಕ್ತರವರು ೧೫

## ೩೮

## ರಾಸಕ್ರೀಡೆ

ರಾಗ : ಕೇದಾರಗೌಳ ತಾಳ : ಜಕ್ಕಣಿ (?) [ಏಕತಾಳ]

ಕಾಮನಯ್ಯನ ಕಾಮಿನಿಯರ ಕಾಮುಕ ಭಕ್ತಿಯೆ ಮುಕ್ತಿ
ಸೋಮಕುಲಾಬ್ಧಿಸೋಮ ನೀರದಶ್ಯಾಮನ ಪ್ರೇಮಪಾತ್ರರು ಪ.

ಮುಗ್ಧಾಂಗಿಯಳ ಮುಖವನು ಪ್ರಿಯನು ಸ್ನಿಗ್ಧ ಸುಹಾಸದಲಿ ಚುಂಬಿಸುವಂತೆ
ದುಗ್ಧಾಬ್ಧಿಯ ಜಾತನುದಯವಲಿ ಪ್ರಾಕ್‌ದಿಗ್ವಧು ಸಂಗವ ಮೆರೆಯಲು
ಸುಗ್ಗಿಯಾಯಿತು ಗೋಪಾಲಕರ ವಧುವರ್ಗಕೆಯೆಲ್ಲ ಕಬ್ಬುಬಿಲ್ಲಿನವನ ಸು
ವರ್ಗಣಕ್ಕೆ ಮರುಳಂಗೋಡರಾಗವರ್ ಉಗ್ಗಡ ವೇಣುನಾದಕ್ಕೆ ೧

ಕುಸುಮ ತರುಲತಾಳಿ ಶಿಶುಗಳೆಸೆವ ಕರಸ್ಪರ್ಶದಿಂದಲಿ
ಶಶಿಯು ಪರಾಮೃಶವ ಮಾಡಿ ಸುಸುಖವೀವ ತೆರದಲಿ
ಪಸರಿಸಿದನು ಶೀತಕಿರಣಗಳ್ ಬಿಸಜಸಖನ ತಾಪವಡಗಿ
ಶಿಶಿರರುತುವಿನ ಯಶಸು ವನದಿ ಶಶಿಮುಖಿಯರೆದೆಗೆ ಇಸಿತು ೨

ಶ್ರೀಕರನ ವಾ(ಆ?)ರುಣ ಕುಂಕುಮದಿಂದ ಲಕುಮಿ ಮುಖವು ಒಪ್ಪುವ ತೆರದಿ
ಸಂಕಲಾನಿಧಿಯ ಬಿಂಬವ ವನದಿ ಶ್ರೀಕೃಷ್ಣ ಕಂಡು ವೇಣುವನು
ಬೇಕಾದ ವಾಮದೃಶೆಯರಿಗೋಸುಗನೇಕ ಮಂಜುಳ ರಾಗಂಗಳ ನುಡಿಸಿದ
ಆ ಕಾಂತೆಯರಾಗ ಕೇಳಿದರು ಮಾರಸಾಯಕದಿ ಉರುಚಿತ್ತವೇಗದಿ ೩

ನೋಕಿ ಲಜ್ಜೆಯನು ನಡೆದರೆಲ್ಲರು ಶ್ರೀಕಾಂತನನ್ನೊಡಗೂಡಲಾಗಿ ಮನೆ
ಯ ಕೆಲಸವನು ಬಿಟ್ಟು ಮೋಹಿಸಿದರ್ ಮಕ್ಕಳು ಸ್ವಕೀಯ ಪುರುಷರ
ಆಕಳ ಕರೆಸಿ ವೃಷಕೆ ಮುರುವ ಹಾಕಿ ಶಿಶುಗಳಾಕ್ರೋಶವ ಕೇಳದೆ
ತೋಕರೆಂದಳತೀ ಮಾನವೆತ್ತಿಕೊಂಡು ರಾಕಾಚಂದ್ರಾಸ್ಯೆಯರು ನಡೆದರು ೪

ಕರೆದ ಹಾಲ ಬಿಸುಟು ತಮ್ಮಯ ತರಳರ್ಗೆ ಸ್ತನ ಪೂರ್ಣ ಕೊಡದೆ
ಪರಿವೇಷಣವ ಮಾಡುತ ಬಿಟ್ಟರು ಹರಿಯ ಕೊಳಲ ಧ್ವನಿಕೇಳಿ ೫

ಕರವಲಯವ ಕಾಲಿಗಿಟ್ಟುಕೊಂಡು ಚರಣಭೂಷಣ ಕೈಗೆ ಸಿಕ್ಕಿಸಿ
ಕರಣಕುಂಡಲ ನಾಸದಲಿಟ್ಟು ಬರಿಯ ಮೂಗುತಿ ಕಿವಿಗಿಟ್ಟು
ಕೊರಳ ಮಾಲೆಯನೆ ಕಟಿಗೆ ಸುತ್ತಿ ಕೊರಳಿಗೆ ಕಾಂಚೀದಾಮವ ಹಾಕಿ
ನೆರೆ ನಿವಾರಿಸುವರನು ನೂಕಿ ಪರಮಪುರುಷನೈದಿದರು ೬

ಭವನ ಧವನ ಬಿಟ್ಟು ಸಿರಿಮಾಧವನ ಭಕುತಿನಿಟ್ಟು ವಿರಹದಾ
ಹವದಿ ನೊಂದು ವಿಷ್ಣು ಧ್ಯಾಪಕೆರವರು ವೇಣುರವರಸ
ಸವಿದು ಪ್ರಿಯವಿಯೋಗ ದುಸ್ಸಹ ಲವಯುಗವೆಂದು ಗುಣತ್ರಯಂಗಳ
ಹವಣ ಮುರಿದು ಜಾರ ಭಕುತಿ ಭಾವದಿ ಅಚ್ಯುತನ ನೆನೆದರು ೭

ಅವ್ಯಕ್ತಪ್ರಮೇಯ ಗುಣಗಣಾಬ್ಧಿಯು ಸುವ್ಯಕ್ತಮಾಡಿದ ಕಾಮಿನಿಯರ್ಗೆ ಸ್ನೇಹ
ನವ್ಯ ನವ್ಯ ಸುಖವನಗಿತ್ತ ನಿರ್ಲಿಪ್ತ ಭಾವ್ಯಜ್ಞಾನಾತ್ಮ ಮೂರುತಿದೇವ
ದಿವ್ಯಜ್ಞಾನವ ಭಕ್ತಿಭರಿತಗೋವರ್ಗೆ ದಿವ್ಯ ಜ್ಞಾನೋಪದೇಶವನು ಮಾಡಿದ
ದಿವ್ಯಜನಗುರು ಮೋಹಿಸಿದನು ಕಾಮವ್ಯಥೆ ಉದ್ರೇಕವಾಗುವಂತೆ ೮

ಆ ಗೋಷ್ಠ ನಾರಿಯರ ನೋಡಿ ಮುಕುಂದ ಈಗಾಗಮನವೇಕೆಂದ ನಿಮಗೆ ಭೀಕರಾ
ದಾ ಘೋರ ರಾತ್ರಿಲಿ ದುಷ್ಟವಿಹಾರವು ನಾಗಾರಿಮಧ್ಯೆಯರ್ಗುಚಿತವಲ್ಲ
ಬೇಗದಿ ನಿಮ್ಮಾಪ್ತರು ಅರಸಿ ಕಾಣದಾಗಿದ್ದು ಖೇದ ಮಾಳ್ಪುದೆ ಅಧರ್ಮವು
ಸಾಗಿ ಬಂದುದಕೆ ಕಂಡಿರಿ ನಮ್ಮನು ಪೂಗೊಂಚಲು ತರುಲತೆಗಳ ೯

ರಮ್ಯವನವು ಪಲ್ಲವ ಶಾಖೆ ಕುಂಜ ಯಮುನಾನುಜಾವೇಗ ಸೌಂದರ್ಯ ನೋಡಿ
ನಿಮ್ಮ ಮುಖ ಬಾಲಕಾರ್ಕ ದೀಪದಲಿಯೆ ನಿಮ್ಮಾಳ್ವತ್ತೆ ಮಾವ ಪುರುಷರ
ಸಮ್ಮತವಲ್ಲ ಉಪೇಕ್ಷೆಯು ಸ್ತ್ರೀಯರ ಜನ್ಮಕ್ಕೆ ಪತಿಯರ ಸೇವೆಯೇ ಮುಖ್ಯವು
ಧರ್ಮವಲ್ಲನ್ಯಪುರುಷರ ಸೇವೆಯು ಸಖ್ಯ ಸಂಭಾಷಣ ಸಹವಾಸವು ೧೦

ನನ್ನೀಕ್ಷಣ ಶ್ರವಣ ಕೀರ್ತನೆ ಧ್ಯಾನದ ಪುಣ್ಯವೇ ಅಧಿಕವಾ ಮತ್ಸೇವೆಗೆ
ಸನ್ನಿಕರಷಣ ಫಲವಧಿಕವಲ್ಲ ಇನ್ನೈದಿರೆಂದ್ಹರಿ ನುಡಿದರೆ
ಕನ್ನೆಯರಿಗೆ ಹೃತ್ತಾಪವಡರಿತು ಇನ್ನೇಕೀ ಜನ್ಮವೆನುತಾರ್ತಸ್ವನದಿ
ಚಿನ್ಮಯ ಹರೆ ವ್ಯರ್ಥವಾಯಿತು ಎಂದು ವಾಕ್ ಸನ್ನಿರೋಧರಾಗಿ ತಲೆಬಾಗಿ ೧೧

ಕಣ್ಣಲಿ ಅಶ್ರು ತುಂಬಿ ಬಂದು ಧಾರಿಟ್ಟವು ಪೊನ್ಗೂಡಮೊಲೆಯ ಗಂಧಾನುಲೇಪದ
ಹೊನ್ನ ಕಂಪ್ಪಸವ ತೋಯಿಸಿದವಿಳೆಯ ಕನ್ಯರುಂಗುಟದಿ ಲೇಖಿಸುತ್ತ

ಚಂದನ ವೈಜಯಂತಿ ಕೊರಳಿಂದ ಗೋಪೇರ ವೃಂದದಿ ರಾಜೀವ ನೀಲೋತ್ಪಲ ಕುಸುಮ
ಗಂಧ ಮಾರುತನಿಂ ಗಾನಕೇಳಿ ಕುಂದರಹಿತನಾದನು ನಂದದಿಂದ ೧೮

ಕಾಳಿಂದಿಕೂಲ ಭ್ರಾಜದುದ್ಯಾನಗಳಲಿ ಆ ಲೋಲನೇತ್ರೇರ ಕ್ರೀಡಿಸಿ ಅಲ್ಲಲ್ಲಿ
ಮೆಚ್ಚಿಮನಾರ್ತೇರ ತೋಳಲಿ ತೋಳಿಟ್ಟು ಭಾಳ ನರ್ಮೋಕ್ತಿಯಿಂದಲೊಪ್ಪಿ
ಪ್ರೇಮಲೋಲ ವಾರ್ತೋಕ್ತಿಗಳಿಂದ ಕೂಡಿ ಕರಾಳ ಕ್ರೀಡೆಯಿಂದ ವಾಸವ ಜಗುಳಿಸಿ
ಮೇಲಿಟ್ಟ ನೆ ಮೊಲೆಯಲ್ಲಿ ಲೇಪಿಸಿದ ಸಾಲು ಕರಜಾಗ್ರಗಳಿಂದಲಿ ೧೯

ಕಾಮಾಗ್ನಿಯಿಂ ತಪ್ತರಾದಯುವತಿಗೆ ಪೂರ್ಣಕಾಮ ಮನ್ನಿಸಿದರೆ ಮತ್ತರಾದರು
ಪ್ರೇಮಾವಲೋಕನ ಭಾಗ್ಯವುದಿಸಿತು ಸೋಮಪೂರ್ಣ ಸುಮುಖಿಯರಿಗೆ
ಶ್ರೀ ಮಾಧವ ತಮ್ಮ ವಶ್ಯನಾದನೆಂದು ವಾಮಭ್ರುಕೆಯರು ತಿಳಿದರಾಕ್ಷಣ
ಈ ಮಹಾಪರಾಧವ ಕಂಡು ದೇವೇಶ ತಾ ಮತ್ತೆ ಅಪ್ರತ್ಯಕ್ಷನಾದನು ೨೦

ಶ್ರೀ ಭೂದುರ್ಗಾಲೋಲ ಲೀಲಾವಿಲಾಸನ ತ್ರಿಭುವನೇಶ್ವರ ತ್ರಿಭುವನಾಧಿಪ
ಭೂಭೃತ ಸಂಭೃತ ಸನ್ನುತ ಶ್ರೀಪದ್ಮನಾಭನಂತಾನಂತ ಭಾನುಭಾ
ಭೂಭಾರಸಂಹಾರವಾರಕೃಪಾಕರ ಸ್ವಭಾವ ಪ್ರಭವ ಜ್ಞಾನಾನಂದಧರ
ಶ್ರೀಭೃತ್ ಪ್ರಸನ್ನವೆಂಕಟಕೃಷ್ಣ ಸರ್ವೇಷ್ಟ ಶೋಭಿಸಿದನು ವ್ರಜದಿ ೨೧

## ೩೯

ರಾಗ : ಬೇಗಡಾ ತಾಳ : ಅಟ್ಟ

ಶ್ರೀಕೃಷ್ಣ ಒಮ್ಮೆಯೊಮ್ಮಿರುಳೆ ತನ್ನ ಕೃತಿಯಡಗಿಸಿ ಮರಳೆ
ಗೋಕುಲವರಸೆರ್ಗೆ ವ್ಯಾಕುಲಚಿತ್ತವು ಶೋಕಸಮುದ್ರವು ಮುಂದೋರೆ ಪ.

ಪ್ರೇಷ್ಯಾನುಪ್ರೇಷ್ಯನಂತಾಗೆ ಗುಣೋತ್ಕೃಷ್ಟವ ಪಾಡಿದರಾಗೆ
ಕಷ್ಟ ಭ್ರಾಂತಿಯಲಿ ತರುಲತೆ ನದಿಯೊಳ್ಕೈಥೇಷ್ಟ ನುಡಿಯ ನುಡಿದರಾಗೆ ೧

ಸೃಷ್ಟಿಯೋಳ್ ಪರಿಪೂರ್ಣ ಪರಿಯ ಕಂಗೆಟ್ಟು ಕೇಳುವದಾಶ್ಚರ್ಯ
ವೃಷ್ಣಿಕುಲೇಶನು ಬಿಟ್ಟನು ನಮಗೇನಂ ಬಟ್ಟೆ ಹೇಳಿದ ಹೇಳಿ ತ್ವರಿಯ ೨

ಪಿಪ್ಪಲ ನ್ಯಗ್ರೋಧ ಬದರಿ ನೀಪ ಸಂಪಿಗೌದುಂಬರ ಹವರಿ
ಅಪ್ಪುತಪ್ಪುತ ಪೋದ ನಾರೇರ ನಂದಜ ತಪ್ಪಿಸೈದಿದನು ಕಂಡಿಹಿರೆ ೩

ಕುರವಕಶೋಕೆ ಕಿಂಶುಕವೇ ಶ್ರೀ ಹರಿಪ್ರಿಯ ತುಲಸಿಯೂಥಿಕವೆ
ಸುರಹೊನ್ನೆ ನಾಗ ಪುನ್ನಾಗವೆ ಜಂಬೂಜಂಬೀರವಲ್ಲಿ ಕಂಡಿಲ್ಲವೆ ೪

ಮರುಗ ಮಲ್ಲಿಗೆ ಮಾಲತಿಯೆ ಜಕ್ಕೆ ವರಜಾಯಿ ಚೂತ ಸಂತತಿಯೆ
ಸುರಗಿ ಶಾವಂತಿಗೆ ಬಕುಲ ಕೋವಿದಾರ ಪರಮಪುರುಷನಿಲ್ಲಿ ಎಲ್ಲೆ ೫

ಕಂಡಿರಾ ಮಾಧವನಿಂದೆ ನದಿ ತಂದ ತಂಡದ ಮರದ ಮಂದೆ
ಪುಂಡರೀಕಾಕ್ಷನ ಕರಲಿಪಾಮೃತವನುಂಡುಂಡ ಸ್ವಾಬಳ್ಳಿಯ ವೃಂದೇ ೬

ಹರಿಪಾದ ಸ್ಪರ್ಶ ಪುಣ್ಯಧಾತ್ರೆ ಶ್ರೀ ಹರಿಯಶಸ್ಸು ಪಾರಿಜಾತೆ
ನೆರೆ ನಮ್ಮ ಕುಲಸ್ವಾಮಿ ಬರಲಿಲ್ಲವೇ ಇಲ್ಲಿ ಪರಮಪುರುಷ ಕುಂದಜಾತೆ ೭

ಇಂತು ತರುಲತೆ ಭ್ರಮರಗಳ ಕೇಳಿ ಕಾಂತೇರು ವಿರಹಾಗ್ನಿದಿಗಿಲ
ಶಾಂತತಿಲ್ಲದೆ ಕಂಡರು ಭುವಿಯೊಳು ಶ್ರೀಕಾಂತನ್ಹೆಜ್ಜೆ ದೊಂದಿದವಳ ೮

ಪತಿಯ ಕೂಡ್ಯೈದಿದವಳ ಕಂಡು ರತಿಪತಿಯ ಮಾರ್ಗಣೆ ತಾಕಿದ್ದಿಂತು
ಪತಿ ತನ್ನಂಗನೆಯೊಳ ರತಿಯಿಂದಪ್ಪುವಂತೆ ಸತಿಯ ತೋಳಿಲಿ ತೋಳಿಟ್ಟಿಹನೆಂದು ೯

ಪರಮ ಸುಕೃತಿಯೆವಳೆಂದು ದುಃಖಭರಿತರಾಗಿ ನಡೆತಂದು
ಧರೆಯ ಮೇಲವಳ್ಹೆಜ್ಜೆ ಅಡಗಿದ್ದಲ್ಲಿ ಶ್ರೀ ಹರಿ ಹೆಜ್ಜೆ ಕಂಡೆಂದು ನೊಂದು ೧೦

ನೊಂದಿದರು ಹೃತ್ತಾಪದಿಂದ ತನ್ನ ಮಡದಿ ಬಳಲಿದಳು ಹಾ ಹಾಯೆಂದು
ಹೆಡಕನೇರಿಸಿಕೊಂಡು ನಳಿನನಯನ ನಿಂತ ಅಡಿಗಳು ಜಡಿವವು ಇಳಿಯಲ್ಲೆಂದು ೧೧

ಲಲನೇರೆ ನೋಡಬನ್ನ್ಯನತ ಜಂಚಲದಿಂದ ಸುಯಿಲಡಿ ಇಡುತ
ನಳಿನಜ ಸುರರಿಗೆ ಹರಿಯಂಘ್ರಿ ರಜಾಮೋಘ ಈ ಕೆಳದಿಗೆ ಹೆಗಲಿತ್ತ ನಾಥ ೧೨

ಹೆಗಲನೇರಿದವಳ ಕೈಯಿಂದ ಹೂವ ತೆಗೆಸಿದನಿಲ್ಲಿ ಗೋವಿಂದ
ಜಗತೀಲವನ ಪಾದಪದ್ಮ ಒಪ್ಪುತಿವೆ ಮಿಗೆ ಧ್ವಜ ಚಕ್ರಾಬ್ಜದಿಂದ ೧೩

ಕೇಶ ಪ್ರಸರಣವ ಮಾಡಿ ಹೂವ ಕೇಶಕ್ಕೀಶ ಮುಡಿಸಿದ ನೋಡೆ
ಕೇಶವನು ಬಳಿಗಭೀಷ್ಟೆ ಪೂರೈಸಿದ ಈ ಸೌಖ್ಯ ನಮಗಿಲ್ಲ ಪ್ರಾಥೆ ೧೪

ಹೀಗೆ ಪ್ರಲಾಪಿಸುವುದನು ದಯದಿ ಶ್ರೀ ಗೋಪಿನಾಥ ತಿಳಿದನು
ಹೀಗವಳ ಮೇಲೆ ತಾ ಸ್ನೇಹ ಮಾಡಲ್ಕೆ ಬೇಗ ಸೊಕ್ಕಿದಳವಿವೇಕಿ ೧೫

ಎಳೆಯರಿನಿಯರ ಇಷ್ಟರಾಪ್ತರ ಬಳಿಯ ಮೀರುತ ಬಂದೆವಚ್ಯುತ
ಲಲಿತ ಗೀತದಾಲಾಪ ಮೋಹಮಾಬಲೆರ ನೈಶಕೆ ಬಿಟ್ಟ ಕುಹಕ ೧೬

ಮುಗುಳನಗೆ ಮೊಗವ್ವ ಮೋಹ ನೋಟವು ಮುಗುಳಗಣ್ಣೆಯನು ಮೀಟುವ ಘನ
ಮುಗಿಲು ನಿಮ್ಮುವ ಮಾಟ ಕೆಡೆವೆ ಬಿಗಿದು ಅಪ್ಪುವೆಂಬೆಸೆವ ಮೋಹವು ೧೭

ಆಕಳ ಕಾವರಾಮಂಗನಾಹರ ಪ್ರಕಟ ನಿನ್ನವಂ ಪಾಪ ಪೋಪುದು
ಸ್ವಕಿಯರಾರ್ತನಾಹ ಸರ್ವರೋಗಹ ನಿಖಿಳರಾಶೆಯ ನೀ ಪೂರೈಸಯ್ಯ ೧೮

ಪ್ರಸನ್ನವೆಂಕಟಾ ಪದಾಪ್ರಮಾಣಿಕಾ ಆಕಿಯುಗೀತವ ಅರಿತು ಮಾಧವ
ಪ್ರಸನ್ನವಾಗುವಾಪತ್ತು ಹರಿಸುವ ಕಮಲಮುಖಿಯರೊಳು ಸ್ನೇಹತಪ್ತರಾ ೧೯

ಇತಿ ಗೋಪ್ಯಃ ಪ್ರಗಾಯಂತ್ಯಃ ಪ್ರಲಪಂತ್ಯಶ್ಚಚಿತ್ರಧಾ
ರುರುದುಃ ಸುಸ್ವರಂ ರಾಜನ್ ಕೃಷ್ಣದರ್ಶನ ಲಾಲಸಾಃ ೨೦

ತಾಸಾಮಾವಿರಭೂಚ್ಛೌರಿಃ ಸ್ಮಯಮಾನ ಮುಖಾಂಬುಜಃ
ಪೀತಾಂಬರಧರ : ಸ್ರಗ್ವೀ ಸಾಕ್ಷಾನ್ಮನ್ಮಥ ಮನ್ಮಥಃ ೨೧

## ೪೧

**ರಾಗ : ಸಾವೇರಿ** **ಚೂರ್ಣಿಕಾವೃತ್ತ**

ಈ ಪರಿ ಗೋಪಿಕಾಮೂಪರಲಾಪಿಸೆ ತಾಪಿಸೆ
ಶ್ರೀಪತಿ ಭೂಪತಿ ಗೋಪತಿ ತಾ ಪರಾತ್ಪರನೈಸೆ
ಆಪದ್ಧಾರಕ ವ್ಯಾಪಕ ರೂಪಕ ತಾ ಪುನರಪ್ಯುದಿಸೆ
ಭೂಪತಿವಂಶಪ್ರದೀಪಕ ಗೋಪಿ ಸಮೀಪಕೆ ಬರೆ ಥಳಥಳಿಸೆ ೧

ದಿನಮಣಿ ಗಣಮಣಿ ಮೌಳಿಮಕರಕುಂಡಲಮಂಡಿತ ಗಂಡ
ವನಜನಯನ ತಣ್ಣಗಿರ್ದಸಂತಿರುವ ತುಂಡ
ಘನನೀಲನಿಭತನು ಕರಿಕರಾಭ ದೋರ್ದಂಡ
ಮನೋಜಜನಕ ಸಿರಿವನಿತಾನನನವೀನ ನೀರಜ ಚಂಡ ೨

ಮಿನುಗುವೆಳೆನಗೆ ಮೋಹನ ಭ್ರೂ ನಟನವಿಲಾಸದ ಶೌಂಡ
ವನಸ್ರಗ್ವೈಜಯಂತಿಧರ ಘನ ಕೌಸ್ತುಭಕೇಯೂರ ಚಿರರುಚಿರಾಂಬರೋದ್ದಂಡ

ಇಂದು ಮುಕುಂದನಪ್ಪಿಕೊಂಡನೆ ನುಡಿದನು ಮಂದರಧರ ಸಿರಿನಲ್ಲ
ಹೊಂದದ ಬಯಕೆಯ ಮಂದಮತಿಗಳ ಕೂಡಿಂದು ಸೌಹೃದ ಧರ್ಮವಲ್ಲ
ಒಂದಿನಿತಾರ್ಥನ ಎಂದು ಇಚ್ಛೆ ಸಲಿಪ ಮಂದಿಗೊಲಿವೆ ಹುಸಿಯಲ್ಲ
ತಂದೆಗೆ ತನ್ನಯ ಕಂದಗಳಲಿ ಸ್ನೇಹ ಬಂದಂತಿರೆ ಕೈವಲ್ಯ ೧೩

ನಿತ್ಯಚಿತ್ತದಿ ಸರ್ವಾತ್ಮರಾಮಗೆ ಮನವಿತ್ತಿದ್ದ ಧೀರರಿಗೊಲಿವೆ
ಪುತ್ರಕಲತ್ರಸ್ವಕ್ಷೇತ್ರವಿತ್ತಾಧಿಕ ಮಿತ್ರರು ಹರಿಯೆಂಬರ್ಗೊಲಿವೆ
ಮತ್ತೊಂದು ಬಾಧಕೆ ಎತ್ತೆತ್ತಲಸದ ಮುಕ್ತಬೋಧಕರಿಗೊಲಿವೆ
ಭಕ್ತರ ಸುರಧೇನು ವಿರಕ್ತರ ಸುರತರು ಚಿತ್ತಯಿಸಾರ ಹೊಂದಿರುವೆ ೧೪

ಮೋದವರ್ಧನದಲಿ ಧನಾಧಿಪನ ಚಿತ್ತಮೋದವ ಬಳಲಿಸಿದಂತೆ
ರೋದಿಸಿ ಮಾವನ ಶೋಧಿಸಿದಿರಿ ಪರಮನಾದರದಲಿ ನಿಂದಂತೆ
ಮೇದಿನಿಲಿ ನಿಮ್ಮ ಋಣವನೆಂದು ಸಾರಿಶು ನಾ ದಾಸ ಪರಿ ತಿದ್ದಲ್ಮತ್ತೆ
ಐದರಿಗೆಂದನು ಮಾಧವ ಮೋಕ್ಷದ ಹಾದಿಯ ಮಾತುಗಳಂತೆ ೧೫

ಹರಿಮುಖ ನಿಸೃತಸ್ತೋತ್ರದ ಸುಧಾರಸ ಕರ್ಣಪುಟಗಳಿಂದ ಸವಿದು
ವಿರಹದಿ ಜನಿಸಿದ ಜ್ವರವಡಗಿರೆ ಸುಂದರನಂಗಸಂಗಿಯರ್ಗಂದು
ಪರಮಪುರುಷಹರಿ ಸ್ವರಮಣ ಗೋಪೇರೊಳ್ ವರರಾಸಕ್ರೀಡೆಗೆ ಬಂದು
ಹರಿಣಕುಣಿಕನೇತ್ರೆರ ಕರೆದನು ಸತ್ ಸರಸಮಂಡಲದಲಿ ನಿಂದು ೧೬

ಯೋಗೇಶ್ವರ ನಾಗಮನೆಯರ ಯೋಗಮಂಡಲದ ಮಧ್ಯದಲಿ
ಬೇಗಿಬ್ಬಿಬ್ಬರಿಗೊಂದು ರೂಪ ತಾನಾಗೊಪ್ಪಿದ ಸ್ವಸುಖದಲಿ
ನಾಗವೇಣಿಯರ ಬಾಹುಗಳಲ್ಲಿ ಬಾಪ್ಪಿಟ್ಟು ಕೈಗಳಿಗಿಂಬು ಕಂಠದಲಿ
ಭೋಗಿಸಿದನು ಚೆನ್ನಾಗಿ ಗುಣತ್ರಯ ನೀಗಿದಗೊಲಿವಂದದಲಿ ೧೭

ಸ್ತ್ರೀರತ್ನಂಗಳೊಳಾರಾಜಿಪ ನೀಲನೀರದಗಾತ್ರ ಹೈಮಮಣಿ
ಹಾರದ ಮಧ್ಯದಿ ಚಾರು ನೀಲದ ಮಣಿ ತೋರುವ ತೆರದಿ ಗುಣಮಣಿ
ಭಾರಿ ನೂಪುರ ಝಣತ್ಕಾರದ ವಲಯದ ನೀರೆಯರ ಕಂಠಮಣಿ
ಮೇರೆಯಿಲ್ಲದ ಸುಖವಾರಿಧಿ ನಂದಕಿಶೋರ ಚಿದ್ಗುಣಗಣದ ಖಣಿ ೧೮

ಹೊಳೆವ ಶಂಕುಮಂಡಲ ಮಧ್ಯ ಸ್ಥಾಪಿಸಿ ಗೆಳತಿಯರನು ಹೊಂದಿ ಶೌರಿ
ವಲಯಾಕಾರದಿ ನಿಲಿಸಿದ ಗೋಪೇರ ಬಳಗವನಾಗ ಮುರಾರಿ
ಕೆಳದೆರ ಗಾತ್ರಮಂಜುಳಮಧುರ ಸ್ವರಗಳ ಕೇಳಿದನು ಉದಾರಿ
ಚಲಿತ ಪದನ್ಯಾಸಗಳ ಪರಣಿಗಳ ಕಲಿಸಿದನಭಿನಯ ತೋರಿ ೧೯

ಕಾಮ ಕ್ರೋಧವ ಗೆದ್ದು ನೇಮದಲಿದ್ದು ಸೋಮಕುಲಕೆ ಮಲ್ಲಿಭವ
ಹೋಮವ ಮಾಡ್ಯಂತ್ಯ ಸೋಮಪಾನವನುಂಡು ವ್ಯೋಮಕೆತ್ಯಂತೆ ಮಲ್ಲಿಭವ
ಭೂಮಂಡಲ ಸುತ್ತಿ ಹೈಮಪರ್ವತದಾನ ತಾ ಮಾಡಿದರ್ಗೆ ಮಲ್ಲಿಭವ
ಶ್ರೀ ಮಹಾಲಕ್ಷ್ಮಿಯ ಸ್ವಾಮಿ ಶ್ರೀಕೃಷ್ಣನ ಕಾಮಿನೇರ್ಗೀಭಾಗ್ಯ ಸುಲಭವು ೨೦

ರಂಗನ ಮಂಗಳ ಅಂಘ್ರಿಯುಗಗಳ ಸಂಗತಿಯು ಗುರುತಿಟ್ಟು
ಹಿಂಗದಪಾಂಗದ ಕಂಗಳ ಶಿಂಗರ ಅಂಗನೆರಿಂಗಿತವಷ್ಟು
ಅಂಗಜನಂ ಗೆಲ್ವನಂ ಗುಣ ಸಂಗೀತ ಸಂಗಿಸೆ ಮಂಗಳೆರಷ್ಟು
ತುಂಗ ವಿಹಂಗ ತುರಂಗ ಪ್ರಸನ್ವೆಂಕಟ ಸಂಗೆಯರ್ಗೀಲಭವಿಷ್ಟು ೨೧

## ೪೫
## ಸ್ರಗ್ಧರಾ ವೃತ್ತ

ಪಾದನ್ಯಾಸಂಗಳಿಂದಾ ಭುಜಗಳ ಒಳಪುಂ ಭ್ರೂವಿಲಾಸಂಗಳಿಂದಾ
ಮೋದ ಸ್ಮಿತೇಕ್ಷಣ್ಣದಿಂದಾ ಮದಿಪ ನಡುವಿನಿಂ ನರ್ತಿಪಾ ಜವ್ವನೇರು
ದೇದೀಪ್ಯಪ್ರೋಜ್ವಲಾಲೇ ಕದಪಲಿ ಹೊಳೆಯಲ್ ಸೋಮರ್ಮಿಡೀಬಿಟ್ಟಲೇಯಲ್
ಸ್ವೇದಾಸ್ಯಾಳೀಯರಿಂದಾ ಹರಿವಘು ತಟಿತವು ಮಿಂಚಿ ಮೇಘಾಂಗದಲ್ಲಿ ೧

**ವೃತ್ತ ಪಂಚಚಾಮರ** **ತಾಳ : ಮಠ್ಯ**

ಸ್ವರವನೆತ್ತಿ ಪಾಡಿದರ್ ಸುಕಂಡೆಯಮುನಾನ್ವಿತೇರ್
ಪರಿಸ್ಪರ್ಶೋತ್ಸವಾಗಿರಲ್ ಸುಗಾಯಕೇರ್ಹರಿಪ್ರಿಯರ್ ೨

ಮುಕುಂದಗಾನಕೆ ಸಮ ಸುಕುಂದವಂತಿನಿಯೋರ್ವಳು
ಸ್ವಕೌಶಲವ ತೋರ್ದಳು ಸುಸಾಧು ಸಾಧು ಎನ್ನಲು ೩

ಸ್ವರಂಗಳ ಸುಜಾತಿಗೆ ಹರಿಯು ಮೆಚ್ಚಿದಾಕೆಗೆ
ಪರಮ್ಮ ಮಾನವಿತ್ತನು ಪರಾತ್ಪರ ಸ್ವಪ್ರಿಯನು ೪

ಬಳಲಿದ ನಾರಿಯೊಬ್ಬಳ ಆಲವರ್ಮುಡಿಯು ಚೆಲ್ಲಲು
ಬಳಿಯಲಿರಲು ಗದಾಧರನು ಅವಳ್ಗೆ ಸ್ಕಂಧವಿತ್ತನು ೫

ಸುಚಂದನೋತ್ಪಲಂಗಳಿಂ ಸುಚಿನ್ಹಿತಾ ಸುಬಾಹುಗಳಿಂ
ಚುಂಬಿಸ್ಯಾಘ್ರಾಣಿಸಿದಳು ಶುಚಿವ್ರತೆಯು ಒಬ್ಬಳು ೬

ಬೆಮರ್ದು ಶ್ರಾಂತೆಗೋಪಕೇರಮರ್ದು ಅಪ್ಪಿ ತೋಳ್ಗಳಿಂ
ಸುಮೃಷ್ಟ ತಾಂಬೂಲಿಪ್ಪೆಸಲ್ ಸುಪಾರನಯ್ಯ ನೀಡಲು ೭

ಕಪೋಲದೊಳ್ ಕಪೋಲವಂ ಸುಪ್ರಿಯಳೊಬ್ಬಳಿಟ್ಟಳು
ಗೋಪಾಲಕೇಶನೋಷ್ಠದೊಳ್ ನಿಜೋಷ್ಠ ಒಬ್ಬಳಿಟ್ಟಳು ೮

ಸುಗಂಧವೆತ್ತ ತಂಬುಲವ ಸ್ವನಾಥ ನೀಡೆ ಮೆದ್ದಳು
ಸುಗೀತವೆತ್ತಿ ಪಾಡಿದಳ್ ಸುನೃತ್ಯ ಒಬ್ಬಳಾಡಿದಳ್ ೯

ರಝಣತ್ಕರಿಪ ಅಂದುಗೆ ಕಿಣಿಕ್ಕಿಣಿಪ್ಪ ಕಿಂಕಿಣಿ
ಮಣಿಯ ಕಾಂಚಿದಾಮದಿಂ ಮಣಿವ ಮಧ್ಯೆಯೊಬ್ಬಳು ೧೦

ಕುಣಿದು ದಣಿದು ಒಬ್ಬಳು ಮನೋಜನಯ್ಯನಪ್ಪಲು
ಸ್ತನದ್ವಯಂಗಳೊಳ್ಸುರಿಯ ಪಾಣಿಯನೊತ್ತಿಕೊಂಡಳು ೧೧

ಏಕಾಂತಪ್ರಿಯನಂಸದೊಳು ಸ್ವಕಂಧರೊಬ್ಬಳಿಟ್ಟಳು
ಸುಖಿಗಳಗ್ರಣಿಯೊಬ್ಬಳು ಮುಖಂ ಮುಖಕ್ಕೆ ನೀಡಲು ೧೨

ಪ್ರಸನ್ನಕೃಷ್ಣನಂಗನೇಪ್ರಸನ್ನತೆಯೊಳಿದ್ದನು
ಪ್ರಸನ್ನವಾದ ಶುಕಮುನಿ ಪ್ರಸನ್ನ ವಾಕ್ಯಕೀರ್ತನೆ ೧೩

ಪ್ರಸನ್ನ ವೆಂಕಟೇಶನ ಪ್ರಸನ್ನವಾರ್ತೆ ಕೇಳ್ದನು
ಪ್ರಸನ್ನಚಿತ್ತ ಭೂಪತಿ ಪ್ರಸನ್ನ ಭಾಗವತವನು ೧೪

## ೪೭

**ರಾಗ : ಮೋಹನಕಲ್ಯಾಣಿ** **ತಾಳ : ಜಕ್ಕಣಿ ?**

ರಾಸ ಕ್ರೀಡೆಯಲಾಸಖಿರ್ಗೆ ವಾಸುದೇವನ
ಲೇಸಿನಾಟ ಲೇಶ ತೋರ್ದು ತೋಷಿಸಿ ಮನ ಪ.

ತುರುಬು ಸಡಲಿ ಪೋರೆಯ ಮರೆಯ ಕುರುಳಿನಸಿಯರು
ಕರದ ಕಂಕಣ ನೂಪುರ ಝಣತ್ಕರಿಪ ಅಬಲೇರು ೧

ನರೆ ಬೆಮರ್ದು ಮೆರೆವ ವದನ ಕಿರಿಯನಗೆಯರು
ಹರಿಣಾಂಕನ್ನ ಭರಿತ ಕಾಂತಿಲಿ ವರಿಸುತಿದ್ದರು ೨

ಮುಡಿಯುವನಾಲಿಕೆ ಎಡೆಲಿಮಾಡಕೆ ಸಿಡಿಪ ರಭಸದಿ
ಕಡಲಶಯನನೊಡನೆ ಸಮಾಪಿಶಿಮುಲ್ಲಾಸದಿ ೩

ಬಿಡದೆ ಬರುವ ಜಡಿಮ ನರ್ತಿಸೆ ಮೃಡ ಸುರೇಶರ
ಗಡಣ ತಮ್ಮ ಮಡದಿಯರನು ಮಡುಕಿತಿದ್ದರು ೪

ಕೆಳದಿಯರ ಮಂಜುಳಗಾಯನ ನಳಿನನಯನನ
ಗಳದ ಸೊಬಗಿನೊಳಗೆ ಮರೆವ ಅಳಿಗಳ ಸ್ವನ ೫

ಲಲಿತವೋರೆ ನಳಿನಸಂಭವೇಶರುಗಳಾದ್ಯರ
ಒಳಗ ಮೌನದಲಿ ಕುಳಿತರು ತಲೆಬಾಗಿ ಅವರ ೬

ಹರಿಕರಾಬ್ಜದಿ ಸ್ಫುರಿಸಿ ಗೋಪೇರ ಕರಿಕರಾಭದ
ಸರಳ ತೋಳುಗಳೆರಡನಪ್ಪಿದ ಕರುಣಾರಸದಿಂದ ೭

ಪರಮಪುರುಷ ಪರಮಮುಕ್ತರರಸ ಸಿರಿವರ
ನರವಿಡಂಬನ ಆರುಹಿದ ಗೋಪಿಯರಿಗೆ ಮನೋಹರ ೮

ಹಸಿತವಕ್ತ್ರ ಲಸತ್ ಸ್ವತಂತ್ರ ಶಶಿಮುಖಿಯರೊಳು
ಅಸಮ ಕ್ರೀಡಾವಿಲಾಸದಿ ಒಪ್ಪಿದ ಸ್ವಸುಖಿ ದಯಾಳು ೯

ಕಾಮಾರ್ದಿತರಾದ ಕಾಮಿನಿಯರಿಗೆ ಕಾಮ ಪೂರೈಸಿದಾ
ರಾಮೇರಿಗೆ ಆತ್ಮರಾಮ ಸಂಗಿಸಿದ ಪ್ರೇಮಾಕುಲೇಕ್ಷಣದ ೧೦

ಬಿಟ್ಟ ಮುಡಿಗಳ ಕಟ್ಟಲಿಲ್ಲವರು ಉಟ್ಟಂಬರ ಹೊಂದರು
ಇಟ್ಟಡಿ ಕುಚದ ಪಟ್ಟಿಕೆ ಕಾಣರು ಗಟ್ಟ್ಯಾಗಿ ಬೆರೆತರು ೧೧

ಇಟ್ಟಿಹಾಲಂಕಾರವಷ್ಟು ಮರೆದರು ತೊಟ್ಟ ಕಂಚುಕಗಳ
ಪುಟ್ಟವು ಬಿಟ್ಟರೆ ದಿಟ್ಟಿಯಿಂ ನೋಡರು ಕೃಷ್ಣ ಭಾವುಕೆಯರು ೧೨

ದೇಹೇಂದ್ರಿಯ ಪ್ರಾಣಾ ಶ್ರೀಹರಿಗರ್ಪಿಸಿ ಬಾಹ್ಯಾರ್ಥವಂ ಮರೆವ
ಸ್ನೇಹಕ್ಕೆ ಮೆಚ್ಚಿದ ಆ ಹೆಂಗಳೌಘದ ಸಾಹಸಕೊಪ್ಪಿದ ೧೩

ಈ ಸರ್ವವಿಷಯದಾಸೆಯ ಮರೆದ ಅಸಂಪ್ರಜ್ಞಾತರಿಗೆ
ಈಶನೊಲಿದಂತೆ ಆ ಸತಿಯರನುಲ್ಲಾಸದಿ ಕೂಡಿದಾಗೆ ೧೪

ಸುರನಾರಿಯರು ಹರಿಯಕ್ರೀಡೆಗೆ ಬೆರೆತು ಸಂಭ್ರಮಿಸಿ
ನೆರೆವರ್ ತಮ ತಮ್ಮರಸರ ಸ್ಮರಶರಕೆ ಮೋಹಿಸಿ ೧೫

ಪ್ರಾಣಪತಿನ ನಿಮಿಷರಹಿತಾಂಬ ಉದಾಸ ತನ್ನಯ
ಮಾಡದಿರುವರು ದುಡುಕಿ ವೇಗದಿ ಕೊಡಿಪ ನೋಡಿರಯ್ಯ ೧೬

ಭಾವಕೆ ಮೆಚ್ಚಿದ ಶ್ರೀವತ್ಸಲಾಂಛನ ಗೋಪೇರನಪ್ಪಿದನು
ದೇವಿಯಾನಂದ ತೀವಿದ ಪಾರ್ಥಿಗೆ ಶ್ರೀವರ ಸಂಭ್ರಮನು ೧೭

ಗೋಪೇರ ಸಂಖ್ಯೆಗೆ ಶ್ರೀಪತಿ ಸ್ವಕೀಯ ರೂಪಗಳ ತೋರಿದ
ಅಪಸ್ವರಭೀಷ್ಟ ತಾ ಪೂರ್ಣಮಾಡಿದ ಪ್ರೇಮದಿ ಮುಕುಂದ ೧೮

ಸತಿಯರೆಲ್ಲರು ರತಿವಿಹಾರದಿ ಅತುಳ ಶ್ರಾಂತರಾಗೆ
ರತಿಪತಿಪಿತಾಚ್ಯುತ ಹೆಂಗಳ್ಗೆ ತಾ ಪ್ರತತಿ ಹೊಂದಿ ಆಗೆ ೧೯

ಕಮಲಾಕ್ಷಿಯರ ಶ್ರಮಯ ಬೆಮರ ರಮೇಶ ತೆಗೆದರೆ
ಅಮರನಾರೇರು ಭ್ರಮಿಸಿ ಲೀಲೆಗೆ ಅಮಮ ಎನುತಿರೆ ೨೦

ಕಬ್ಬುಬಿಲ್ಲನ ಕೊಬ್ಬು ಮುರಿದಿಪ ಹಬ್ಬನುಂಡಸತಿಯರು
ಹುಬ್ಬೋರೆಗಣ್ಣಲಿ ಉಬ್ಬುಬ್ಬಿ ನೋಡಿದರಬ್ಧೀಶನಂಗನೇರು ೨೧

ಹೊಳೆವಕುಂಡಲ ಉಲಿವ ಕುಂತಳ ವಿಳಸಗೆಕಾಂತಿಯು
ಬೆಳಗಿಲೊಪ್ಪುವ ನಲ್ಲನ ನೋಡಿ ಕಂಗಳವು ದಣಿಯವೈ ೨೨

ಈಶನ ಸುರತಹಾಸ ವಿಲೋಕನಕೆ ಸತಿಯರು ಮೆಚ್ಚಿ
ಶ್ರೀಶಂಭಗುಣವ ತೋಷದಿ ಪಾಡಿದರು ಸುಖಾಂಬುಧಿ ಹೆಚ್ಚಿ ೨೩

ತನ್ನಂಗಸಂಗದಿ ಪಿನ್ನಾಸ್ಯ ಬಳಲಿದ ಕನ್ಯೇರ ಕುಚದಲಿ
ಛಿನ್ನ ಕುಂಕುಮ ಗಂಧಾನುಲೇಪಾಂಗವ ನೋಡಿದ ದಯೆಯಲಿ ೨೪

ಪೀನ ಪಯೋಧರದಾ ನಾರಿಯರಿಂದ ಜ್ಞಾನಾನಂದವಾರಿಧಿ
ತಾ ನೀರ ಪೊಕ್ಕ ಹೆಣ್ಣಾನೆಗಳ ಕೂಡಿ ಮದ್ದಾನೆಯಂತೆ ಭರದಿ ೨೫

ಕಾಳಿಂದಿ ಮಧ್ಯದಿ ಕಾಕಾಹಿವೇಣೇರ ಮ್ಯಾಳದಿ ಸ್ನೇಹದಲಿ
ಶ್ರೀಲೋಲ ಕ್ರೀಡಿಸೆ ಬಾಲೇರು ರಂಗಂಗೆ ಮೇಲೆ ನೀರು ಚೆಲ್ಲಲಿ ೨೬

ಕೃಷ್ಣ ಪಾದಕೆ ಮುಖೇಸ್ತ್ರ ನೀರು ಚಿಕ್ಕಿ ತುಷ್ಟಿ ಸಖಿಯರು
ಕೃಷ್ಣನೊಡನೆ ಪಾಡಿ ಒಪ್ಪಿದರು ಬಲಿದೊಪ್ಪಿದರು ಸುಗುಣೇರು ೨೭

ರಂಗನ ಆಟಕೆ ಅಂಗನೇರೊಡನಾಟಕೆ ಶೃಂಗಾರ ಪಾಠಕೆ
ಬಂಗಾರಿಗಿಟ್ಟ ಸುರಾಂಗನೇರ್ಸುರರು ಸಂಗೀತ ಮೇಳಕ್ಕೆ ೨೮

ವೈಮಾನಿಕರೆಲ್ಲ ಪ್ರೇಮವಾಪ್ತಿ ಲೋಕಾದಿ ವ್ಯೋಮಾಂಗಣೆಯಲಿ
ರಾಮಾಮರೋಕ್ಷ್ಯರಾಮ ಶ್ರೀನಿವಾಸ ಸೋಮಾಂಶುಕಾಶದಲಿ ೨೯

ಆನೋಘಮಯಾನಂದಾ ಮಾನವನೊಡನೆ ನಾಮಮೃತೇರಾಮೃತ
ರಾಮಾನುಜನೊಡಿ ಯಮುನೆ ಕೂಲ ನಿತ್ಯಾನಂದವನ ತಾ ೩೦

ಸರ್ವಧರ್ಮಜ್ಞನು ಸರ್ವಗೋಪ್ತ ವ್ಯಾಪ್ತ ಸರ್ವಸ್ವತಂತ್ರ ಕೃಷ್ಣ
ಸರ್ವ ವಿಶ್ವೋತ್ತರ ಸರ್ವ ಸುರೇಶ್ವರ ಸರ್ವಾರ್ಥದಾತ ನಾಥ ೩೧

ಯಾವ ಮುಕುಂದನಂಘ್ರಿವಾರಿಜದ ಸೇವಿಪ ಯೋಗಿಗಳ
ಭಾವತೃಪ್ತಿಯ ಕಂಡು ವಾಸುದೇವಗೆ ಈ ವಿಷಯಾಸೆಗಳ ೩೨

ಯಾವ ದೇಹವನೀವ ತಮೋಯೋಗ್ಯ ಕೋವಿದರೆ ಬಲ್ಲರು
ಆವನ ಕ್ರೀಡಾಗುಣ ವಿಶಿಷ್ಟ ಲೀಲೆಗೆ ವಿಶ್ರಾಂತಿಗಾಣರು ೩೩

ನಮೊ ನಮೊ ನಮೊ ನಾರದ ಸಂಗೇಯಾ ನಮೊ ನಮೊ ಸ್ವಪ್ರಿಯಾ
ನಮೊ ನಮೊ ನಮೋನಂತ ಸದ್ಗುಣಾತ್ಮಾ ನಮೊ ನಮೋಂತರಾತ್ಮ ೩೪

ವಿಷ್ಣುರಾತಂಗೆ ವಿಶಿಷ್ಟ ಕೃಷ್ಣಲೀಲ ಶಿಷ್ಟ ಬ್ರಹ್ಮರತನು
ಸ್ಪಷ್ಟಾಗಿ ಹೇಳಲು ತುಷ್ಟಿಲಿ ನೃಪೇಶನು ಇಷ್ಟಲಿ ಕೇಳಿದನು ೩೫

ಶ್ರೀಕೃಷ್ಣನಾಶ್ರಿತ ಏಕಾಂತಿಗಳಿಗೆ ವ್ಯಾಕುಲ ಚಿತ್ತವಿಲ್ಲ
ಶ್ರೀಕೃಷ್ಣಗ್ಹೇಳುವ ಶ್ಲೋಕದನುಜರನೇಕ ಸಂದೇಹವಿಲ್ಲ ೩೬

ಗೋಪ್ಯವ ಗೋಪೇರಿಗಿಷ್ಟ ಸುಖವಿತ್ತು ಸ್ಪಷ್ಟ ತಾ ನಿರ್ಲಿಪ್ತನು
ಶಿಷ್ಟರ್ಗೆ ಮೋಹಪೊಂದಿಷ್ಟು ತೋರದೆಂದು ದುಷ್ಟರ ಮೋಹನನು ೩೭

ಶ್ರೀಪತಿಯಾಜ್ಞೆಯಿಂ ಗೋಪೇರು ಸಾರ್ದರು ತಾಪಬಟ್ಟಾಲಯವ
ಸ್ವಪತ್ನಿವಿಯೋಗ ಗೋಪರ್ಗೆ ತೋರದು ಪ್ರೇರಿಸೆ ಮಾಧವ ೩೮

ಶ್ರೀದೇವಿಯಿಂತೆನೆ ಪಾದಾಂಗುಲಿ ನಖ ಅವರದಿಂ ನೋಡುತ
ಮೋದದಿಂದೊಂದು ಗುಣವನ್ನು ಕಾಣಲು ದಾಮೋದರನ್ನ ಸತ್ಯಗಾಥಾ ೬೯

ಕೃಷ್ಣಾ ವಿಕಾರಣ ಬಿಟ್ಟು ನಿಂದಕ್ಷಣ ದುಷ್ಟನಾಶಕ ಮೋಹನ
ಗೋಷ್ಠದ ನಾರೇರದಿನ್ನು ನೀನಾರ ಫಲೇಷ್ಟ ದಾಭಾವನೆ ೭೦

ಆಪನ್ನ ಜನರ ತಾಪಪಾಪಹರ ಶ್ರೀ ಪರಬ್ರಹ್ಮ ಕೃಷ್ಣ
ಈ ಪರಿ ಪೊರೆವನು ಶ್ರೀ ಪ್ರಸನ್ನವೆಂಕಟಾಧಿಪ ವೃಂದಾರಕೇಷ್ಟ ೭೧

## ೭೨

ರಾಗ : ಪನ್ನೀಚ್ಛಬೌಳಿ ತಾಳ : ಅಟ್ಟ

ಗೋಷ್ಠದ ಜನಕೆಲ್ಲ ಸೃಷ್ಟಿಕೋಟಿಗೆಲ್ಲ ಕೃಷ್ಣನೆ ಪೋಷಕನು
ಘೃಷ್ಟಾನ್ನದಾನದ ತುಷ್ಟಿದ ಮುಕ್ತಿದ ದುಷ್ಟಜನಾರ್ದನನು ಪ.

ಒಂದಿನಂಬಿಕೆಯು ಜಾತ್ರೆ ನೆರೆಯಲೆಂದು ಬಂದು ನಂದಗೋಪನು
ಬಂದಾ ವಿಪ್ರಾಸೀಕೆ ಕೂಟದಿಂದ ಸಹವಾಗಿ ಮಿಂದು ಸರಸ್ವತಿಯನು
ಸ್ಕಂದನಮ್ಮನಿಗೆ ವಂದಿಸಿ ಪೂಜಿಸ್ಯಾನಂದದಿ ಭೋಜನವ
ಬಂದ ಇಷ್ಟಜನರಿಂದ ಮಾಡಿದನು ಚಂದದಿಂದ ದಾನವ ೧

ವ್ರಜಪತಿಯನು ನುಂಗಿತು ಬಂದು ಅದ್ಭುತ ಅಜಗರವಲ್ಲಿ ಬಂದು
ಸುಜನ ಗೋಪರು ರಾಮಕೃಷ್ಣ ಹರೆ ಹರೆ ಭಜಕರಕ್ಷ ನೀನೆಂದು
ರಜನಿಯಲ್ಲಿ ಕೊಳ್ಳಿಯಪಿಡಿದಂಜುತ ಅಜಗರನ್ನ ಕೊಂದರೆಂದು
ಭುಜಗವಂಜದೆ ಗ್ರಸಿಸೆ ಕಂಡನಚ್ಯುತ ಅಜಸ್ಮರರಯ್ಯನೆಂದು ೨

ತಂದೆಯ ನುಂಗುವ ಅಹಿಯನ್ನು ಪಾದಾಬ್ಜ ಪೊಂದಿಸಿ ಉದ್ಧರಿಸಿದನು
ದಂದಶೂಕಗೆ ದಿವ್ಯಶರೀರವಾಕ್ಷಣ ತಂದಿತ್ತ ಸರ್ವೇಶನು
ಹಿಂದೆ ವಿದ್ಯಾಧರ ತಾನು ಮುನಿಯ ಶಾಪದಿಂದಹಿಯಾಗಿರಲು
ಇಂದಿರೆಯರಸನ ಅಂಘ್ರಿಯು ಸೋಂಕೆ ಬಂದೀ ಸ್ತೋತ್ರವ ಮಾಡಲು ೩

ವಾಣಿಗಳೆಲ್ಲ ನಿನ್ನಾನಂದಮಯ ಗುಣವನು ಪೊಗಳ್ವಂತೆ ಮಾಡು
ಶ್ರೀನಯ ನಿನ್ನ ಕಥಾಮೃತ ಶ್ರವಣಕೆ ಮಾನದ ಲಾಘವ ನೀಡು
ಪಾಣಿಗಳಿಂ ನಿನ್ನ ಸತ್ಕರ್ಮ ವ್ಯಾಸಂಗವು ನಿನ್ನ ಶ್ರೀಪಾದಕೆ
ದೀನವತ್ಸಲ ನನ್ನ ತಲೆ ವಂದನೆಗೆ ಮಾಡು ಧ್ಯಾನಕೆ ಮನಮಾಡು ೪

ನಿನ್ನ ಮೂರ್ತಿಗಳಿನ್ನು ನೇತ್ರ ಚಿತ್ತದಲಿಟ್ಟು ನಿನ್ನ ದಾಸರ ಸಂಗವು
ಅನಂತ ಜನ್ಮಕೆ ದೊರಕಲೆಂದೆನುತ ವಿಮಾನ ಹತ್ತಿ ನಡೆದ
ಈ ನಾಟ್ಯವ ನೋಡಿ ನಂದಾದಿ ಗೋಪರು ಆನಂದಭರಿತರಾಗಿ
ಮಹಾಶ್ಚರ್ಯವೆಂದಾನಂದವಾಯು ಪ್ರಸನ್ವೆಂಕಟನ ಹೊಗಳಿದರು ೫

## ೪೮

ರಾಗ : ಸೌರಾಷ್ಟ್ರ — ತಾಳ : ಜಕ್ಕಣಿ?

ಅವರೇ ಸುಕೃತಿಗಳು ಅವರೇ ಧನ್ಯರು ಗೋವಿಂದನಾಶ್ರಿತರು
ಸವಿಯುವ ಭಕ್ತಿ ಸ್ತವನಗಳಿಂದ ಭವವ ಗೆದ್ದವರು ಪ.

ಆ ವಿದ್ಯಾಧರನು ವಿಮಾನವೈದಿದ ವಿವರವರಿತನು
ಗೋಪರಿಗೊಡೆಯನ ಮಗನ ಮಹಿಮೆಯ ಸ್ತವಿಸಿ ನಲಿವನು
ಸವಿಯುದಾಶ್ಚರ್ಯ ಕರ್ಮವ ಮನುಜ ದಿವಿಜರ್ದೃಗಳಲು
ಗೋಪ ಗೋಪೇರಿಂದ ವ್ರಜ ಪ್ರೋಕ್ಷನು ಭುವನದೊಡೆಯನು ೧

ಶ್ರೀಮನೋಹರ ಸಖಿಯರ ಬೆರಸಿ ರಾಮಸಹ ನಿಶದಿ
ಕಾಮನೋತ್ಸವದಿ ವನವನ ತಿರುಗೆ ಕಾಮಿನೇರ್ ಸುಸ್ವರದಿ
ಪ್ರೇಮ ಸುಹೃದ್ಗಾನ ಪಾಲಿಸುತಿರಲು ಕೌಮುದಿಯು ಕಾಶದಿ
ಕ್ಷೌಮಾಂಬರನುಟ್ಟು ಸೃಗ್ಗಂಧಲೇಪನದಿ ಮುತ್ತಣಿಗಳ ತೆರದಿ ೨

ವಿಶ್ವಾನಂದಕರು ರಾಗವ ಮಾಡಲು ವಿಶ್ವಗೋಪಿ ಜನರು
ಸುಸ್ವರ ಮೂರ್ಛೆಯೊಳು ವಸ್ತ್ರಾಭರಣ ಸ್ವಕೀಯವೆಂದರು
ಸುಶ್ವಾಸೋಚ್ಛ್ವಾಸವ ಬಿಡುತ ಮುಕುಂದ ಶಬ್ದದೇಕೇಶನೆಂದು
ಸುಸ್ವಭಾವ ಹೊಂದಿ ಪೂತಾಂಗೇರು ತಾವು ಅಸ್ವತಂತ್ರ್ಯರಾದರೆಂದು ೩

ಪೂಗೋಲನುಬ್ಬರ ನಿಬ್ಬರವಾಗಿದೆ ಶ್ರೀಗೋವಿಂದ ಕಾಯಿದನು
ಆಗೊಬ್ಬ ಖಳನು ಶಂಖಚೂಡನು ಈ ಗೋಪೆರೊಯ್ಯೆ ಬಂದನು
ನಾಗಗಮನೇರು ಹರೆ ಕೃಷ್ಣರಾಮ ನೀ ಗತಿ ಕಾಯೆಂದರು
ಈಗಂಜಬೇಡ್ಯೆಂದು ಅಗ್ರಜನ ಸಹ ಬೇಗದಿ ಬೆಂಬತ್ತಿದನು ೪

ರಾಮಾಧೋಕ್ಷಜರು ಚೋರನ ಬೆನ್ನಟ್ಟಿ ಶ್ರೀಮುತ್ತಾಳ ಹಸ್ತದಿ
ಆಮತ್ತದೈತ್ಯನ ಮಸ್ತಕವಿಳುಹಿ ಸುಮೌಳಿರತ್ನವ ಕಿತ್ತಿ

ರಾಮನಿಗೆ ಕೊಟ್ಟನು ವಾಮಾಕ್ಷೀರ ಬಿಡಿಸಿದ ಮನೋಹರ ಹರಿ
ಕಾಮನಯ್ಯನ ತಾವ್ ಮೊರೆಯೊಕ್ಕರು ಸ್ವಾಮಿ ದುಷ್ಟಕುಲಹರೆ ೫

ಹೇ ಕೃಷ್ಣ ಅಚ್ಯುತಾ ದುಃಖಹರ್ತಾ ಭಕ್ತರಕಾಮಧೇನು ಮುಕುಂದ
ಹೇ ಕೇಶಿಸೂದನ ಪೂತನಾಂತಕ ದೇವ ಚಕ್ರವಾತಘ್ನಾನಂದ
ಹೇ ಕಂಜಲೋಚನ ಗೋಪಿಕಾಮನೋಹರ ಹೇ ಕಾಳಿಂದಿವಿಹಾರ
ನಾಕೇಶಮದಹರ ಗೋವರ್ಧನೋದ್ಧಾರ ಲೋಕೈಕ ಸತ್ಸುಂದರ ೬

ಕಾಳಿಯಮದಹಾಹಿಕಾಮಿನೀಸ್ತುತಿಪ್ರಿಯ ಭೂಲಲನಾ ಭಯಘ್ನ
ಬಾಲಕ ಲೀಲಾವಿಶಾಲ ಶ್ರೀಲೋಲ ಭೂಲೋಲ ದುರ್ಗಾಂಗನೇಶಾ
ಮಾಲಾಲಿತಾಂಘ್ರಿ ತ್ರಿಯಾಲಯ ಸುರಮುನಿಲಾಲಿತಚರಣಾಂಬುಜ
ತ್ರಿಲೋಕಸೃಷ್ಟ್ಯಾದಿಮೂಲಕಾರಣ ಗುಣಜಾಲ ಶ್ರೀ ನಾರಾಯಣ ೭

ಪೋಕ ಶಂಖಚೂಡ ಬಂದೆಮ್ಮನೊಯ್ಯಲು ನೀ ಕಾಯಿದೆಯೊ ದಯಾಳು
ಸಾಕು ನಮೊ ನಮೊ ನಮೊ ನಮೊಯೆಂದು ಅನೇಕಸ್ತೋತ್ರವ ಮಾಡಲು
ಆ ಕನ್ಯೆರ ಭಕ್ತಿಭಾವಕೆ ಮೆಚ್ಚಿದ ಗೋಕುಲದವರಿಗೆಲ್ಲ
ವೈಕುಂಠವೇ ಫಲ ಮಾಡಿಟ್ಟ ಶ್ರೀಕೃಷ್ಣ ಆಕಳಕಾವ ಚೆಲ್ವ ೮

ಈ ಕೃಷ್ಣಚರಿತ್ರೆ ಏಕಾಂತ ಭಕ್ತಿಲಿ ಲೋಕೇಶ ಪರೀಕ್ಷಿತ
ತಾ ಕೇಳಿದ ಗುರು ಶುಕಮುನೀಶನ ವಾಕ್ಯಾಮೃತ ತತ್ವತಃ
ಆ ಕರ್ಣಪುಟದಿಂದುಂಡು ತೇಗಲು ಲೋಕವೆಲ್ಲ ಪಾವನ
ಶ್ರೀಕಾಂತ ಪ್ರಸನ್ವೆಂಕಟೇಶನ ಲೀಲೆಯನೇ ಕೇಳಿದವ ಜಾಣ ೯

## ೪೯

ರಾಗ :ದೇಸ್ ತಾಳ : ಅಟ್ಟ

## ವೇಣುಗೀತ

ಜಾಣೆ ಗೋಪೇರೊಂದುಗೂಡಿ ವೇಣುಗೋಪತಿಯ ದಿವ್ಯ
ವೇಣುಗೀತೆಯ ಹೇಳಿದರೆ ಗಾನರಸದಲಿ ಪ.

ಜ್ಞಾನಚರ್ಯಾನಂದನ್ನ ರಾಣಿ ಕೇಳಿದಳೆಂದು ವ್ಯಾಸ
ಸೂನು ಪೇಳ್ದ ಭೂಪತಿಗೆ ಆನಂದದಲಿ ಅ.ಪ.

ನಂದನೋದ್ಯಾನದಧಿಕಾನಂದವಿದ್ದ ವನಗಳಲ್ಲಿ
ಬಂದು ಕೃಷ್ಣ ಚರಿಸುವ ಗೋಷ್ಪಂದದಿ ನಿತ್ಯ
ಇಂದುಮುಖಿಯರು ಪ್ರಿಯನ ನೋಡಿ ಕಂದರ್ಪನ ಸಾಯಕಕ್ಕೆ
ನೊಂದು ವೇಣುವೈಚಿತ್ರ್ಯದ ಚಂದ ಪೊಗಳುತ ೧

ವಾಮ ಬಾಹ್ವಲಿಟ್ಟು ಗೋಣು ವಾಮಕಪೋಲವ ಭೂ
ಭ್ರಮಣ ವಿಲಾಸಾರ್ಪಿತ ಹೇಮವೇಣುವ
ಕೋಮಲಾಂಗುಲಿಲಿ ರಾಗ ನೇಮಿಸೆ ಮುಕುಳಿಸ್ವನಾ
ಕಾಮಿನೇರು ಕೇಳುತಲಿ ಕಾಮಬಾಣದಿ ೨

ವ್ಯಾಮೋಹಿಪಂತೆ ಮಾಡಿದ ಶ್ರೀ ಮುಕುಂದಾಂಬರದಲಿಹ
ವೈಮಾನಿಕ ಸಿದ್ಧಪತ್ನೇರ್ ಭ್ರಮೆಗೊಂಡರು
ಕಾಮಬಾಣನಟ್ಟು ಲಜ್ಜೆಯು ಮರೆದು ಜಗುಳಿ ಬಿದ್ದ
ಹೇಮಾಂಬರಾಭರಣಗಳ ನೇಮಗಾಣರು ೩

ಕೇಳಿರಿ ಸ್ತ್ರೀಜನರುಗಳಿರಾ ಮಾಲೆ ಮಿಂಚಿನ ಚೆಲುವ
ನೀಲನೀರದ ಶಾಮಲನ ಲೀಲೆ ವೇಣುವಿನ
ಮೇಲು ನಾದ ಕೇಳಿ ಮಾತ್ರ ಬಾಲೇರಿಗೆ ಮೋಕ್ಷಾನಂದ
ಕಾಲ ಕಾಲ ಕಾಣಿಸುವ ಗೋಪಾಲನಂದನ ೪

ಆವ ವಿಚಿತ್ರ ರಾಗವೋ ಆವ ಮೋಹನ ಕರವೋ
ದೇವ ಗಾಯಕಿಯರೆಲ್ಲ ಕೋವಿದರಾಗಿ
ಗೋವು ಮೃಗಾಳಿಗಳೆಲ್ಲ ಭಾವಶುದ್ಧಿಯಿಂದ ಕೇಳಿ
ದೇವೇಶನ ಪದದಿ ತಮ್ಮ ಜೀವ ನೀಡಲು ೫

ಹಿಂಡು ಗೋವು ಹರಿಯ ಕೃತಿಯ ಕಂಡು ಧ್ಯಾನದಲ್ಲಿ ತಂದು
ತುಂಡ ನೆಗಹಿ ಬಾಲವೆತ್ತಿಕೊಂಡು ನಿಂತವು
ತಂಡ ತಂಡ ಒಟ್ಟಿದವು ಹಂಡೆ ಹವಳೆ ಹುಲ್ಲುಗಚ್ಚಿ
ಕೊಂಡು ನಿಂತವಲ್ಲಿಗಲ್ಲಿ ಮಂಡಲಿದ್ದವು ೬

ಕರ್ಣನಿಲ್ಲಿಸಿ ಎವೆಯನಿಡದೆ ಸ್ವರ್ಣವೇಣುವಿನ ರವ
ವರ್ಣಿಸಿ ಮುಕುಂದನಲ್ಲಿ ಮನವನಿಟ್ಟವು
ಘನ್ನ ನಿದ್ರೆಯಾಯ್ತು ಒದಿಯ ತನ್ನ ಕರುವ ನೋಡಲಿಲ್ಲ
ಬಣ್ಣವಿಟ್ಟು ಬರೆದ ಚಿತ್ರವನ್ನು ಹೋಲ್ವವು ೭

ಪೂಗೋಂಚಲು ಬರುಹಿ ಬರ್ಹಿ ಗೋಗೋಪರ್ಗೆ ಕೊಟ್ಟು ಮುಡಿದು
ತಾ ಗೈರಿಕ ಲೇಪಿಸಿಕೊಂಡಾಗ ಎಲ್ಲರು
ನೋಗನಾಂತು ಒಪ್ಪಿದರು ಪ್ರಾಣೇರನಂತತೇಜ
ಯೋಗಿಜನಹೃದಯನಿಲಯಾಮೋಘ ಸುಂದರ ೮

ಪ್ರೇಮದಿಂದ ಕರೆವನಾದ ಗೋವುಕ್ಕಳ ಸಂದೋಹದಿ
ರಾಮನೊಡನೆ ವೇಣುಸ್ವರದಿ ಸ್ವಾಮಿ ಅಚ್ಯುತ
ಹೈಮವಂಶನಾದಸುಧೆಗೆ ಆ ಮಹಾನದಿಗಳೆಲ್ಲ
ತಾ ಮುಂದಕ್ಕೆ ಪ್ರವಹದೋರವು ವ್ಯಾಮೋಹಿಸುತ ೯

ತಾ ಮತ್ತೆ ಹಿಂದಕ್ಕೆ ಬಂದು ಸೋಮಕುಲಪನಂಘ್ರಿಗಳನು
ಆ ಮಹಾ ಭುಜೋರ್ಮಿಗಳಲಿ ಕಾಮಿಸ್ಯಪ್ಪಿದುವು
ಆ ಮಹಿಮೆ ನೋಡಿ ಸುರರಸ್ತೋಮ ಸಿದ್ಧಗಂಧರ್ವರು
ವ್ಯೋಮ ಮಂಡಲದಿ ನಮೊ ನಮೊ ಎಂದರು ೧೦

ಆದಿಪುರುಷ ಸ್ಥಿರೈಶ್ವರ್ಯನಾದ ದೇವವನಗಿರಿಯಲಿ
ಊದಿದ ಷಡ್ರಸದ ವೇಣು ಗೋಧನದ ರಕ್ಷ
ವೇದಾನಂತಾವೇದ್ಯ ಕೃಷ್ಣ ಮಾಧವ ಮುಕ್ತಾರ್ಥಿ ತಾ ಶ್ರೀ
ಪಾದಪದ್ಮಾಮೋದ ಪ್ರಮೋದ ಸುಪಕ್ಷ ೧೧

ಅಪವರ್ಗ್ಯರಿಂದ ಸ್ತೋತ್ರ ಶ್ರೀಪತಿ ಮಾಡಿಸಿಕೊಂಬ
ಗೋಪರ ಸ್ತೋತ್ರಕೊಪ್ಪಿದ ಶ್ರೀಪರಬ್ರಹ್ಮ
ಶ್ರೀಪ್ರಕೃತಿ ಇವನ ಗುಣ ರೂಪಲಾವಣ್ಯಕ್ಕೆ ಸೋತ
ಈ ಪೆಣ್ಗಳಿಗೆ ವಶವಿಡಂಬನ ತೋರ್ಪನಮ್ಮಮ್ಮ ೧೨

ಈ ವನದ ತರುಲತೆಯು ಶ್ರೀವಿಷ್ಣುವಶವಾದವೆಂಬ
ಭಾವತೋರಿ ನಮಿಸಿದವು ಪೂವು ಫಲದಿಂದ
ತೀವಿದ ತೋಷದಿ ವೇಣುರಾವರಸವನುಂಡು ಕೊಬ್ಬಿ
ದಾವು ತಲೆದೂಗಿದವು ಕೋವಿದರಂತೆ ೧೩

ಪ್ರೇಮ ಹರುಷದಶ್ರುಧಾರ ಆ ಮರಂಗಳ್ವಿಟಪಸಾರ
ಭೂಮಿಗಿಳಿವಾಶ್ಚರ್ಯ ನೋಡಿ ಕಾಮಿನೇರೆಲ್ಲ
ಶ್ರೀಮನೋಹರನ್ನ ಕೀರ್ತಿ ಧೀಮಂತ ಜನರೆ ಸ್ಫೂರ್ತಿ
ಪಾಮರರೇನು ಬಲ್ಲರು ಈ ಮಹಾಲೀಲೆ ೧೪

ಕೆಳದಿ ಕೇಳಿ ಗಂಧ ನೀಲೋತ್ಪಲವಾಮೋದಮಯದ ವಕ್ಷಾ
ನಿಲವನುಂಡು ಸೊಕ್ಕಿ ಚರಿಪ ಅಳಿವಿಂಡುಗಳು
ಅಲಘುಗಾನ ಕೇಳಿ ಮುಕುಂದ ತಲೆದೂಗಲು ರಂಹಸದಿ
ನಳಿನಾಕ್ಷನ ಬಳಿಗೆ ಬರಲು ಸಾರಸಹಂಸಗಳು ೧೫

ಲಲಿತವೇಣುಸುಧೆಯನುಂಡು ಕಲವೇರಿ ಕೂಲದೆ ಮೌನದಿ
ಬಳಿಯಲ್ಲಿರೆಗಣ್ಣ ಮುಚ್ಚಿ ನಳಿನನಯನನ
ಚೆಲುವಿಕೆ ಧ್ಯಾನೋಪಾಸನೆಗಳಲಿ ಪರಮಹಂಸರಂತೆ
ನಲಿವ ಸಾರಸ ಹಂಸಗಳ ಬಳಗವನುದಿನ ೧೬

ಅಣ್ಣಗೋವರಿಂದ ಕೂಡಿ ಚಿನ್ಮಯಾಧರದಿ ವೇಣು
ವನ್ನೂದುವ ಹೆಸರುಗೊಂಡು ಕನ್ಯೆ ಗೋಪೆಯರ
ತನ್ನಾನಂದದಿ ತಾ ಪೂರ್ಣ ಜನರ ವಿಡಂಬ ನಟನೆ
ಯನ್ನು ತೋರ್ವ ಅಪ್ಸರ ಮೋಹನ್ನ ಸುಂದರ ೧೭

ಘನ ಮಂಜುಳ ರವದಿ ಗೋವರ್ಧನ ಗಿರಿಯು ಶಬ್ದಿಸಲು
ಘನಗಂಜಿ ಮೆಲ್ಲ ಮೆಲ್ಲನೆ ಸ್ವನಿವಾಸ್ಯದಿದವು
ಘನಶಾಮಲ ನವಗೆ ಬಂಧು ತನುಮನದಿ ಅವಗೆ ಸ್ತೋತ್ರ
ವನು ಮಾಡುವೆವೆಂಬ ಭಯದಿ ಹೆಣಗಿ ನಿಂದುವು ೧೮

ಮಹದತಿಕ್ರಮಣಕಂಜಿ ಮಹಪೂಜೆಯಲಿ ಒಲಿಸುವಂದದಿ
ಅಹಸ್ಸಿನಲ್ಲಿ ಪುಷ್ಪವೃಷ್ಟಿ ಬಹಳಗರೆದುವು
ಮಹಿಯೊಳಗೆ ಹರಿಯ ಆಜ್ಞೆ ವಹಿಸಿದವನಿಗೇವೆ ಮುಕ್ತಿ
ವಹಿಸದವನೆ ದ್ರೋಹಿಯುವಗೆ ಸಹಜಾಂಧಂತಮವು ೧೯

ಶಶಿವದನೆ ನಿನ್ನ ಸೂನು ಕುಶಲವರ್ಯ ಗೋವರೊಳು
ಅಸಮವೇಣುವಿಂದ ಸದ್ರಸದಿ ಗಾಯನವ
ಹೊಸ ಹೊಸ ಸುಮಧುರ ಗೀತ ಎಸೆವ ಬಿಂಬಾಧರದಿ ಇಟ್ಟು
ಶಿಶುಗೆಳೆಯರ ಶಿಕ್ಷಿಪ ವಂಶಗಾಯನವ ೨೦

ದಿವಿಯಲಿ ನೆರೆದ ಸರಸಿಜೋದ್ಭವ ಭವೇಂದ್ರ ಮುಖ್ಯರಾದ
ಕವಿಗಳಾನತ ಕಂಧರದಿ ಕಿವಿಯಗೊಟ್ಟರು
ಕವಿದು ಮೋಹವಿಸ್ಮಿತದಲಿ ನವೆಯದ ಶ್ರೀಹರಿಯಲೀಲೆ
ಸವಿರಸವ ಸವಿದಾನಂದ ಭವನವಿಡಿದರು ೨೧

ಗೋಖುರಾರ್ದಿತ ಗೋಷ್ಠಭೂಮಿ ಶ್ರೀಕಂಜಾಂಕುಶವಜ್ರಧ್ವಜ
ರೇಖಾಂಕಿತ ಶ್ರೀ ಪಾದಾಬ್ಜ ಸೋಂಕೆ ಒಪ್ಪಲು
ನಾಕದವರು ವ್ರಜವಾಸ ಬೇಕೆಂದು ಬಯಸಿದರಲ್ಲಿ
ಶ್ರೀಕೃಷ್ಣಾಂಘ್ರಿಯಾಶ್ರಿತರ್ಗೆ ವೈಕುಂಠವ್ಯಾಕೆ ೨೨

ಶ್ರೀರಮಣ ಸೌಂದರ್ಯಸಾರವ್ನ ಮಾರ್ಗದಿ ಕಂಡು
ಸಾರಂಗಾಕ್ಷೇರ ವಿಲಾಸಕೆ ಮೇರೆದೋರದು
ಸ್ವರ ವೇಣುರಸಾಯನಕ್ಕೆ ನಾರೇರಿಷ್ಟೆ ಹಬ್ಬವಾಗೆ
ಮಾರನ ಮಾರ್ಗಣರಾಶಿ ತೋರುತಿದ್ದುವು ೨೩

ತನು ಮನೆಯ ಮರೆದರವರು ಕನಕಭಾಮಂಬರ ಜಗುಳಿರೆ
ಇನಿತು ವಿಷ್ಟರಿಷ್ಟವರ್ಗೆ ಮುನಿಗಳೆಂದವದಲಿ
ಮಣಿಧರ ಗೋವು ಮೇಸುತೊಮ್ಮೆ ಗೆಳೆಯರಂಸದಿ ಸ್ಕಂಧವಿಟ್ಟು
ಕ್ವಣಿತ ವೇಣು ನುಡಿಸಿ ಮೋಹಿಪ ವನದಿ ವನಮಾಲಿ ೨೪

ಕೃಷ್ಣಸಾರಸತಿಯರ್ತಮ್ಮ ಪುಟ್ಟ ಮರಿಗಳ ಮನೆಯ ಬಿಟ್ಟು
ಕೊಟ್ಟಚ್ಯುತನ ರೂಪವನ್ನು ದಿಟ್ಟಿಸಿದವು
ಕೃಷ್ಣನ್ನ ಲಾವಣ್ಯಾಮೃತವ ಗುಟ್ಟುಕರಿಸಿ ಕಂಗಳಿಂದ
ಗೋಷ್ಠನಾರಿಯರನ್ನು ಪ್ರೋಲ್ಲಾ ತುಷ್ಟಿಸಿದವು ೨೫

ಕುಂದ ಕುಸುಮಮಾಲೆ ತುಳಸಿಗಂಧ ನೀಲೋತ್ಪಲಗಾತ್ರ
ವೃಂದ ಗೋಧನರಕ್ಷಕ ನಂದ ನಿನ್ನ ಪುತ್ರ
ಅಂದು ಮಲಯಜಾನಿಲವ ಹೊಂದಿದ ಯಮುನಾ ತೀರದಲ್ಲಿ
ಮಂದಮಂದಗತಿಯು ಮಾಳ್ಪ ಸುಂದರ ನೇತ್ರ ೨೬

ಮಲಯಜ ಮಾರುತನ ಗಂಧ ಸುಳಿವಲ್ಲಿ ಪಾಠಕರು ಬಂದು
ಲಲಿತಗಾತ್ರದ ಗಾಯಕರು ಚೆಲುವ ನಿಂತಿದ್ದ
ಬಳಿಯಲಿ ನಿಂತು ಭಕ್ತಿಯಿಂದ ಬಲುಸ್ತೋತ್ರವ ಮಾಡುತಿರಲು
ಬಲನ ತಮ್ಮ ಭಜಕರಘವ ಕಳೆದ ಮುಕ್ತಿದಾ ೨೭

ಭಜಕಾಗಾಧ ಪುರುಷಸಾರ ವ್ರಜಕೆ ಬಾಹ ಸಮಯದಲ್ಲಿ
ಸುಜನರಿಂದ ಸೇವಿತನಾದ ನಿಜಸುಖಾಂಬುಧಿ
ಸ್ವಜನಗೋವಿಪ್ರವತ್ಸಲಾಂಬುಜಸಖನ್ನ ಅಸ್ತಮಯದ್ವ
ಗ್ರಜನ ಕೂಡಿ ಬಹನು ಗೋರಜದ ಲಗ್ನದಿ ೨೮

ಗೋಪಿಯರೊಪ್ಪುವ ಘೋಷ ಶ್ರೀಕರಾಂಗವಲ್ಲಿ ತಾಳಿ
ಶ್ರೀಕೃಷ್ಣ ಕೊಳಲನೂದುತ ಆಕಳೊಡನೆ
ಗೋಕುಲವ ಪೊಂದಲಾಗಿ ನಾಕಜನರು ಸುಹೃಜ್ಜನಾ
ನೇಕ ಸ್ತೋತ್ರ ಮಾಡುವರು ನಾಕಿನ್ನದಲಿ ೨೯

ಗೋಪ್ಯ ಗೋಪರ ತಾಪವ ನಿವಾರಿಸುತಿಹ ಜವದಿ
ದೇವಕೀಜಠರಾಬ್ಧಿಚಂದ್ರ ದೇವಗಣೇಂದ್ರ
ಭಾವವಿಲಾಸಪಾಂಗದಿಂದ ಗೋವಳೇರಿಗಮಿತಾನಂದ
ನೀಡುತಿಪ್ಪ ನಿರುತದಲ್ಲಿ ಪಾವನಗುಣಸಾಂದ್ರ ೩೦

ಬದರಪಾಂಡುರಬಿಂಬವದನ ಕುಂಡಲಕಪೋಲ
ಪದುಮರಾಗ ವಜ್ರನೀಲ ನವರತ್ನಾಭರಣ
ಯದುಪತಿ ಯಾಮಿನಿಯಲ್ಲಿ ವಿಧುವಿನ ಬೆಳದಿಂಗಳಲ್ಲಿ
ಸುದತಿಯರ ಕ್ರೀಡೆಯಲಿಪ್ಪ ಮದಗಜಾಭನು ೩೧

ಗೋಪಾಂತಿ ಗೋವಳೆರು ದಿವದಿ ವ್ಯೋಮಕ್ರಾಂತರು ತಾಪಹೊಂದೆ
ಸೋಮಕುಲಜ ಪರಿಹರಿಸಿದ ಶ್ಯಾಮಸುಂದರ
ಕಾಮಿನೇರ ಸನ್ಮಾನದಿ ಸ್ವಾಮಿ ತೋರುತಿಹ ಸತತ
ಭಾಮೆಯರ ಭಕ್ತಿಭಾವಕೆ ಮನೋಹರ ೩೨

ವ್ರಜದ ಗೋಪೇರು ಕೃಷ್ಣನ್ನ ತ್ರಿಜಗಾಶ್ಚರ್ಯದ ಲೀಲೆ
ನಿಜಭಕ್ತಿಯಲಿ ಪಾಡಿ ಸುಖಿಸಿ ಭಜಿಸುತ್ತಿದ್ದರು
ಸುಜನರು ತನ್ಮನಸ್ಕೆಯರು ಗಜರಾಜಗಾಮಿನಿಯರು
ದ್ವಿಜರಾಜವದನೆಯರು ದ್ವಿಜದೇವಪ್ರಿಯರು ೩೩

ಈ ವೇಣುಗೀತಾಮೃತವ ದಾವ ಪ್ರಾಣಿಗಳ್ಕೇಳುವರು
ಭಾವಶುದ್ಧಿಲಿ ಕೇಳುವರು ಕೋವಿದರವರು
ಪಾವನ ಕೃಷ್ಣಚರಿತ್ರೆ ಶ್ರೀವ್ಯಾಸ ಮುನೀಂದ್ರತನಯ
ಶ್ರೀವಿಷ್ಣುರಾತಂಗ್ಹೇಳಿ ಸೇವಿಸಿದನು ೩೪

ಶ್ರೀವರ ಪ್ರಸನ್ನವೆಂಕಟ್ಟದೇವದೇವನು ನಮಗಿಷ್ಟವ
ನೀವನು ಸಂದೇಹವಿಲ್ಲ ದೇವಸುರತರು
ಆವ ಕಾಲಕಾಲದಲ್ಲಿ ಸತ್ಸೇವಕವತ್ಸಲ ಸತ್ಯ
ಭಾವುಕರು ಹರಿವ್ಯಾಸಂಗದ ಜೀವನ್ಮುಕ್ತರು ೩೫

## ೫೦

ರಾಗ : [ಜಂಜೂಟಿ] ತಾಳ : [ಆದಿತಾಳ]

ಕೃಷ್ಣನಾಶ್ರಿತ ಶಿಷ್ಟರೆಲ್ಲರು ತುಷ್ಟಿರಲು ಅರಿಷ್ಟನೆಂಬುವ
ದುಷ್ಟಕಂಸನ ಇಷ್ಟಕಾರ್ಯಕೆ ಗೋಷ್ಠಕೈತಂದ
ಪಾರ್ಷ್ಣಿಬಲರನು ನಷ್ಟ ಮಾಡುವ ಧೃಷ್ಟವೃಷಭನು ಕಷ್ಟಬಡಿಸಿದ
ಪೃಷ್ಠಕಕುದಿಯು ಕಂಪಿಸಿದನು ಮಹಿಯನತಿಘೋರ ೧

ಕಾಲ ಕೆದರುತ ಬಾಲ ನಿಗುರಿಸಿ ಸೀಳಿದನು ಮೇಘಗಳ ಕೋಡಿಲಿ
ಮೇಲೆ ಮೇಲ್ ಮಲಮೂತ್ರ ಬಿಡುತಲಿ ಆಲಿ ಕೆಂಪಡರೆ
ಬಾಲಕರ ಬಾಲೆಯರ ಗೋಗಳ ಮೇಳವಂಜಿಸಿ ಡುರುಕಿಹಾಕುತ
ಸ್ಥೂಲ ಭೀಕರ ಗರ್ಭಿಣಿಯರ ಬಸಿರ ಕೆಡಹಿದನು ೨

ಖೂಳನುಪಟಳ ತಾಳಲಾರದೆ ಗೋಳಿಡುತ ಓಡಿದರು ಸಕಲರು
ಪಾಲಿಸೈ ಗೋವಿಂದ ರಾಮಾಯೆನುತ ಮೊರೆಯಿಡುವ
ಬಾಲೆಯರ ಆರ್ತಸ್ವರಂಗಳ ಕೇಳಿ ಅಂಜದಿರೆನುತ ಅಭಯವ
ಹೇಳಿ ಖಳನೊಳು ಮಾತನಾಡಿದ ಶ್ರೀಲಲನೆಯರಸ ೩

ಎಲೆ ದುರಾತ್ಮಾರಿಷ್ಟವೃಷಭನೆ ಎಳೆಯರನು ಗೋವತ್ಸಗೋವರ
ಲಲನೆಯರನಂಜಿಸುವ ವೀರನೆ ಬಾರೊ ನೀ ನಮ್ಮ
ಬಳಿಯೆ ಶೀಘ್ರದಿ ಫಲವನೀವೆವು ಇಳೆಗೆ ಭಾರಕ ದುಷ್ಟಹರ್ತರು
ಬಲಮುರಾರ್ಯರು ತಿಳಿಯಲಿಲ್ಲವೆ ಮೃತ್ಯು ನಿನಗೆಂದು ೪

ವೀರಧ್ವನಿಯಿಂ ಕರೆದನಚ್ಯುತ ಕ್ಷೂರಶೃಂಗನು ಗೋಣತಗ್ಗಿಸಿ
ಧಾರುಣಿಯ ಕೆದರುತ್ತ ಸುರಪನ ಕರದ ವಜ್ರದೊಲು
ವೀರವೇಗದಿ ಬಂದು ತಗುಲಿದ ಶೌರಿ ಗೆಳೆಯರ ಪೆಗಲಿನಲಿ ನಳಿ
ತೋಳ ಹೇರಿಯೆ ನಗುತ ನೋಡಿದ ದುಷ್ಟಚೇಷ್ಟೆಯನು ೫

ಸಖರನುಳಿದಚ್ಯುತನು ಬರುತಿಹ ಕಕುದಿಯನು ಕೆಡಹಿದನು ಧರೆಯಲಿ
ಪ್ರಖರ ಪುನರಪಿ ಎದ್ದು ಕೋಪದಿ ಕೆಣಕಿದನು ಹರಿಯ
ನಿಖಿಳರೊಡೆಯನವನವಿಷಾಣ[1][ವ][1] ಸುಕರಪಲ್ಲವದ್ಹಿಡಿದಂಕೆಡವಿದ
ಕುಖಳನ್ಹಿಂಗಾಲ್ಪಿಡಿದು ತಿರುಗಿಸಿ ಅಪ್ಪಳಿಸಿದಿಳೆಗೆ ೬

ಮರ್ದಿಸಿದ ಮುಂಗಾಲಿನಿಂದಲಿ ಆರ್ದ್ರವಸ್ತ್ರವ ಹಿಂಡಿದೋಲ್ ಖಳ
ಮರ್ದಕೆತ್ತಿದ ಕೋಡೆರಡರಲಿ ಚೂರ್ಣಿಸಿದ ಬಳಿಕ

---

1 ದ

ಕಾರ್ಯ ರಕ್ಷಿಪ ಕಂಗಳೆರಡು ಉಭಯಾಂಗದ ಪ್ರತಿನಾಥ ಯಮಪುರ
ಸಾರ್ವ ಸುರರೆಂಬರವಿ ತುತಿಸಿದರ್ಪಣಾಪಕೆಂಬುಗಳಿದು ೭

ಸುರಮುನಿಗಳೊಗ್ಗಿ ತುತಿಸಿದರ್ ಹರುಷದಲಿ ಆಗ್ರ ಪಾಳೆಯದರಿಂ
ವರಗೋಪಾತಿಗಳ ಹಿಂಡಿನಿಂ ಮುರಹರ ವ್ರಜವ ಪೊಗಲು
ಚಿರಮಹಿಮನದ್ಭುತ ಸುಕರ್ಮದ ಪರಮಮಾತೆ ಗೋಪಿಯರು ತುತಿಸಲು
ಕರುಣಾಕರನಾದ ಕರುಣಾದೃಷ್ಟ್ಯಾನಂದದಲಿ ನೋಡಿದ ೮

ತನ್ನ ನಂಬಿದ ಜೀವರಿಗೆ ಮತ್ತನ್ಯರಿಂ ಬಾಧೆಯು ಬಾರದೆ
ತನ್ನ ಬಿರುದಿಗೆ ಹಾನಿಬಾರದ ದೀನವತ್ಸಲನು
ಧನ್ಯರನು ಮಾಡಿದನು ವ್ರಜ ಪಾವನ್ನವನು ಮಾಡಿದನು ಯಶೋದೆ ನಂ
ದನ್ನ ಪುಣ್ಯದ ಫಲವು ಶಿರಿಪ್ರಸನ್ನವೆಂಕಟೇಶ ೯

## ೫೧

**ರಾಗ : ಕನ್ನಡ ಕಾಂಬೋಧಿ** **ತಾಳ : ಏಕತಾಳ**

ಕೃಷ್ಣನಾಶ್ರಿತರಿಗೈಥೇಷ್ಟ ಜಯವು ಶ್ರೀ ವಿಷ್ಣು ವೈಷ್ಣವದ್ರೋಹಿಗಳಿಗೆ
ಕಷ್ಟದ ತಮಸು ವಿಶಿಷ್ಟ ಮಹಾಲಯ ದುಷ್ಟರಿಗಪಜಯವಾಗೆ ಪ.

ಜಾತಃ ಕಂಸವಧಾರ್ಥನು ಹರಿಯೆಂಬ ನೀತಪ್ಪನು ಮುನಿಪ್ರಹ್ವ
ರಾತನು ಶ್ರೀತರಣಿ ಪ್ರೀತಿಗೆ ಬಂದನು ಆತುರದಲ್ಲಿ ಸಂಭ್ರಮ್ಮ
ಪಾತಕಿ ಕಂಸಗೆ ಪಾತಕ ರೀತಿಯ ಬೋಧಿಸಿದ್ದೀಗೆ
ತಾತನಂ ನಂದನು ಮಾತೆ ಯಶೋದೆಯು ಘಾತಿಸಿಕೊಳದ ಕನ್ನಿಗೆ ೧

ದೇವಕಿಜಠರಜನಾ ವಾಸುದೇವನು ದೇವಿ ರೋಹಿಣಿಸುತ ಬಲನು
ದೇವಿ ಯಮುನೆ ದಾಟಿ ಗೋಪಪಳ್ಳಿಲಿ ವಸುದೇವನಿಟ್ಟಾ ಕನ್ಯೆಯಳನು
ದೇವಕಿಗಿತ್ತನು ಈ ವಿಧ ಕಾರ್ಯ ನೃದೇವ ವಿಚ್ಚರವ ಹೇಳುವೆನು
ಆ ವೀರರಿಬ್ಬರು ಬೆಳೆವರು ವ್ರಜದಲಿ ಕಾವರು ದೇವಕ್ಕಳನ್ನು ೨

ನಂದನು ಶೌರಿಗೆ ಬಂಧು ಸ್ನೇಹಿತ ಬಲು ಕಂದ ವೀರರು ಉಭಯತರು
ಕೊಂದರು ನಿನ್ನ ಮುಂದಿಯು ಭೋಜಪ ಸಂದೇಹವಿಲ್ಲವಹಿತರು
ಎಂದನೆ ಉಗ್ರದಿ ಬೆಂದನಂ ಸಾಣೆಯ ಹೊಂದಿದ್ದ ಕತ್ತಿಯವಿಡಿದ
ಇಂದೇ ಆನಕದುಂದುಭಿ ಸ್ತ್ರೀಸಹ ಕೊಂದೆನೆನುತ ಖಳನುಡಿದ ೩

